# ನಿಪ್ಪಾಣಿ ವಾಡೆ ಭಿತ್ತಿ ಚಿತ್ರಕಲೆ

ಒಂದು ಅಧ್ಯಯನ

ಎಂ.ಫಿಲ್.ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಕಿರುಸಂಶೋಧನ ಪ್ರಬಂಧ


ಸಂಶೋಧಕ

ಬಿ.ಎಂ. ಪಾಟೀಲ

ಉಪನ್ಯಾಸಕರು

ಹಾಲಭಾವಿ ಸ್ಕೂಲ ಆಫ್ ಆರ್ಟ ಧಾರವಾಡ

ಮಾರ್ಗದರ್ಶಕರು

ಡಾ॥ ಎಸ್.ಸಿ.ಪಾಟೀಲ

ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರು

ಶಿಲ್ಪ ಮತ್ತು ಚಿತ್ರಕಲಾ ಅಧ್ಯಯನ ವಿಭಾಗ

ಬನಶಂಕರಿ







ಲಲಿತ ಕಲಾ ನಿಕಾಯ

ಶಿಲ್ಪ ಮತ್ತು ವರ್ಣಚಿತ್ರಕಲಾ ಅಧ್ಯಯನ ವಿಭಾಗ, ಕನ್ನಡ ವಿಶ್ವವಿದ್ಯಾಲಯ ಹಂಪಿ

ಶಾಖೆ: ಬನಶಂಕರಿ

೨೦೦೭

168

# ನಿಪ್ಪಾಣಿ ಭಿತ್ತಿಚಿತ್ರಕಲೆ : ಒಂದು ಅಧ್ಯಯನ

ಎಂ. ಫಿಲ್. ಪದವಿಗಾಗಿ ಕನ್ನಡ ವಿಶ್ವವಿದ್ಯಾಲಯಕ್ಕೆ ಸಾದರಪಡಿಸಿದ ಕಿರು ಸಂಶೋಧನ ಪ್ರಬಂಧ


ಸಂಶೋಧಕ

**ಬಿ.ಎಂ.ಪಾಟೀಲ**

ಆರ್ಟ ಮಾಸ್ಟರ್ ಡಿಪ್ಲೋಮಾ. ಎಂ.ವ್ಹಿ.ಎ.

ಉಪನ್ಯಾಸಕರು

ಹಾಲಭಾವಿ ಸ್ಕೂಲ ಆಫ್ ಆರ್ಟ, ಧಾರವಾಡ





ಮಾರ್ಗದರ್ಶಕರು

**ಡಾ. ಎಸ್. ಸಿ. ಪಾಟೀಲ**

ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರು

ಶಿಲ್ಪ ಮತ್ತು ವರ್ಣ ಚಿತ್ರಕಲಾ ಅಧ್ಯಯನ ವಿಭಾಗ

ಶಾಖೆ : ಬನಶಂಕರಿ. ಬದಾಮಿ



ಲಲಿತ ಕಲಾ ನಿಕಾಯ

ಶಿಲ್ಪ ಮತ್ತು ವರ್ಣ ಚಿತ್ರಕಲಾ ಅಧ್ಯಯನ ವಿಭಾಗ

ಕನ್ನಡ ವಿಶ್ವವಿದ್ಯಾಲಯ ಹಂಪಿ

ಶಾಖೆ : ಬನಶಂಕರಿ- ೨೦೦೭

# ಪ್ರಮಾಣ ಪತ್ರ

**ನಿಪ್ಪಾಣಿ ಭಿತ್ತಿಚಿತ್ರಕಲೆ : ಒಂದು ಅಧ್ಯಯನ** ಎಂಬ ಶೀರ್ಷಿಕೆಯ ಕಿರು ಸಂಶೋಧನ ಪ್ರಬಂಧವನ್ನು ಡಾ. ಎಸ್. ಸಿ. ಪಾಟೀಲ ಇವರ ಮಾರ್ಗದರ್ಶನದಲ್ಲಿ ಸಿದ್ದಪಡಿಸಿ, ಕನ್ನಡ ವಿಶ್ವವಿದ್ಯಾಲಯ ಲಲಿತಕಲಾ ನಿಕಾಯದ ಶಿಲ್ಪ ಮತ್ತು ವರ್ಣಚಿತ್ರಕಲಾ ಅಧ್ಯಯನ ವಿಭಾಗಕ್ಕೆ ಎಂ.ಫಿಲ್. ಪದವಿಗಾಗಿ ಈ ಪ್ರಂಬಂಧವನ್ನು ಸಲ್ಲಿಸುತ್ತಿದ್ದೇನೆ.

ಪ್ರಸ್ತುತ ಪ್ರಬಂಧದ ಯಾವುದೇ ಭಾಗವನ್ನು ಯಾವುದೇ ಪದವಿ ಅಥವಾ ಇತರೆ ಉದ್ದೇಶಗಳಿಗೆ ಬಳಸಿಕೊಂಡಿಲ್ಲವೆಂದು ಪ್ರಮಾಣೀಕರಿಸುತ್ತೇನೆ.

ದಿನಾಂಕ : ೧೬ ಜುಲೈ ೨೦೦೭
ಸ್ಥಳ : ಬನಶಂಕರಿ, ಬದಾಮಿ

**(ಬಿ. ಎಂ ಪಾಟೀಲ)**
ಶಿಲ್ಪ ಮತ್ತು ವರ್ಣ ಚಿತ್ರಕಲಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ ಹಂಪಿ
ಬನಶಂಕರಿ, ಬದಾಮಿ

# ದೃಢೀಕರಣ ಪತ್ರ

ಬಿ.ಎಂ ಪಾಟೀಲ ಇವರು ಬರೆದು ಸಾದರಪಡಿಸಿದ **ನಿಪ್ಪಾಣಿ ವಾಡೆ ಭಿತ್ತಿಚಿತ್ರಕಲೆ : ಒಂದು ಅಧ್ಯಯನ** ಎಂಬ ಶಿರ್ಷಿಕೆಯ ಕಿರು ಸಂಶೋಧನ ಪ್ರಬಂಧವು ಮೂಲ ಸಂಶೋಧನ ಕೃತಿಯಾಗಿದ್ದು. ಅವರು ನನ್ನ ಮಾರ್ಗದರ್ಶನದಲ್ಲಿ ಕನ್ನಡ ವಿಶ್ವವಿದ್ಯಾಲಯ ಲಲಿತಕಲಾ ನಿಕಾಯದ ಶಿಲ್ಪ ಮತ್ತು ವರ್ಣ ಚಿತ್ರಕಲಾ ಅಧ್ಯಯನ ವಿಭಾಗಕ್ಕೆ ಎಂ. ಫಿಲ್ ಪದವಿಗಾಗಿ ಈ ಮಹಾಪ್ರಬಂಧವನ್ನು ಸಿದ್ದಪಡಿಸಿದ್ದಾರೆ.

ಪ್ರಸ್ತುತ ಪ್ರಬಂಧ ಇಡಿಯಾಗಿ ಇಲ್ಲವೆ ಬಿಡಿಯಾಗಿ ಈ ಮೊದಲು ಎಲ್ಲಿಯೂ ಪ್ರಕಟವಾಗಿಲ್ಲವೆಂದು ಈ ಮೂಲಕ ಪ್ರಮಾಣೀಕರಿಸುತ್ತೇನೆ.

ದಿನಾಂಕ : ೧೬ ಜುಲೈ ೨೦೦೭
ಸ್ಥಳ : ಬನಶಂಕರಿ, ಬದಾಮಿ

(ಡಾ.ಎಸ್.ಸಿ.ಪಾಟೀಲ)
ಪ್ರಾಧ್ಯಾಪಕರು ಮತ್ತು ಮುಖ್ಯಸ್ಥರು
ಶಿಲ್ಪ ಮತ್ತು ವರ್ಣ ಚಿತ್ರಕಲಾ ಅಧ್ಯಯನ ವಿಭಾಗ
ಕನ್ನಡ ವಿಶ್ವವಿದ್ಯಾಲಯ ಹಂಪಿ
ಬನಶಂಕರಿ, ಬದಾಮಿ

# ಪರಿವಿಡಿ





ಅಧ್ಯಾಯ : ಒಂದು

# ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಮತ್ತು ವೈಧಾನಿಕತೆ

## ಅಧ್ಯಯನದ ಉದ್ದೇಶ :

ಚಿತ್ರಕಲೆ ಒಂದು ದೇಶದ ಒಂದು ಜನಾಂಗದ ಇತಿಹಾಸವನ್ನು ತಿಳಿಸುವ ಮಹತ್ವದ ಸಾಧನವಾಗಿದೆ. ಅದು ಪ್ರಾಚೀನ ಸಂಸ್ಕೃತಿಯನ್ನು ಪ್ರತಿಬಿಂಬಿಸುವುದರ ಜೊತೆಗೆ ಆನಂದವನ್ನು ನೀಡುತ್ತದೆ. ಒಂದು ಚಿತ್ರ ಇಲ್ಲವೇ ಶಿಲ್ಪಕಲಾಕೃತಿ ಸಾವಿರಾರು ವರ್ಷಗಳ ಇತಿಹಾಸವನ್ನು ನಮ್ಮ ಕಣ್ಮುಂದೆ ನಿಲ್ಲಿಸುವ ಶಕ್ತಿಯನ್ನು ಪಡೆದಿದೆ. ಮಾನವನ ಮೊದಲ ಭಾಷೆ ಚಿತ್ರಕಲೆಯಿಂದಲೇ ಆರಂಭವಾಯಿತು. ಹಾಗೆಯೇ ಲಿಪಿಯ ಉಗಮಕ್ಕಿಂತಾ ಮೊದಲೇ ಚಿತ್ರಕಲೆ ಬಳಕೆಯಲ್ಲಿತ್ತು ಎಂದು ತಿಳಿದ ಬರುತ್ತದೆ. ಲಲಿತಕಲೆಗಳು ಆಯಾಕಾಲದ ಸಾಂಸ್ಕೃತಿಕ ಇತಿಹಾಸವನ್ನು ತಮ್ಮಲ್ಲಿ ಒಡಮೂಡಿಸಿಕೊಂಡಿರುತ್ತವೆ. ಅಂತೆಯೇ ಸುಮಾರು ೨೦,೦೦೦-೩೦,೦೦೦ ವರ್ಷ ಹಿಂದಿನ ಕಾಲದಲ್ಲಿ ಶಿಲಾಯುಗದ ಮೊದಲ ಅವಧಿಯಲ್ಲಿ, ಮಾನವ ಚಿತ್ರ ಬರೆಯಲು ತಿಳಿದುಕೊಂಡಿದ್ದ, ಆತ ಪ್ರಾಣಿಚಿತ್ರಗಳನ್ನು ಮೂಳೆಗಳ ಮೇಲೆ, ಕಲ್ಲುಗಳ ಮೇಲೆ, ಗವಿಯೊಳಗಿನ ಗೋಡೆಗಳ ಮೇಲೆ, ಆಗಿನ ಮಾನವರು ಬರೆದ ಚಿತ್ರಗಳು ಉತ್ತಮ ಮಟ್ಟದವು ಆಗಿದ್ದವು. ಆಗ ತಾನೆ ಚಿತ್ರಬರೆಯಲು ಮಾನವ ಆರಂಭಿಸಿರಲಾರ. ಅದಕ್ಕೂ ಸಹಸ್ರವರ್ಷಗಳ ಹಿಂದಿನಿಂದಲೂ ಆತ ಚಿತ್ರಬರೆಯುತ್ತಲಿದ್ದು, ಆ ವೇಳೆಗಾಗಲೇ ಚಿತ್ರ ಬರೆಯುವುದರಲ್ಲಿ ಕೈಪಳಗಿರಬೇಕು ಎಂಬ ವಾದವಿದೆ. ಅದು ಪ್ರಾಚೀನ ನಾಗರೀಕತೆಯೊಂದರ ಅಂತಿಮಘಟ್ಟವೇ ಆಗಿರಬಹುದು.[೧] ನಾಗರೀಕತೆ ಅರಳಿದ ನೈಲ್‌ನದಿ, ಯುಫ್ರೆಟಿಸ್, ಸಿಂಧೂನದಿ ತೀರಗಳಲ್ಲಿ ಗ್ರೀಸ್, ರೋಮ್, ಚೀನಾ, ಭಾರತಗಳಲ್ಲಿ ಶ್ರೇಷ್ಠವಾದ ಚಿತ್ರ, ಶಿಲ್ಪ ಕಲೆಗಳ ಕುರಿತು ಬಹಳಷ್ಟು ಸಾಕ್ಷ್ಯಗಳು ದೊರೆತಿವೆ. ಆಯಾ ರಾಷ್ಟ್ರೀಯ ಜೀವನದ ಅಧ್ಯಯನಕ್ಕೆ ಅವು ಸಾಧನಗಳಾಗಿವೆ.

---

೧. ಜ್ಞಾನಗಂಗೋತ್ರಿ, ಪು.೧೭

ಭಾರತದಲ್ಲಿ ಚಿತ್ರಕಲೆಯು ಕ್ರಿ.ಪೂ.೫,೦೦೦ ವರ್ಷಗಳಿಗೂ ಹಿಂದಿನ ಇತಿಹಾಸವಿದೆ. ಆರ್ಯರು ಈ ದೇಶಕ್ಕೆ ಬರುವ ಪೂರ್ವದಲ್ಲಿಯೇ ಅಂದರೆ ಸಿಂಧೂನದಿಯ ತೀರದಲ್ಲಿ ನಾಗರೀಕಥೆ ಉನ್ನತ ಮಟ್ಟವನ್ನು ತಲುಪಿತ್ತು. ಹರಪ್ಪಾ ಮೋಹೆಂಜೋಧಾರೋಗಳ ಭಗ್ನಾವಶೇಷಗಳಲ್ಲಿ ದೊರೆತ ಕಂಚಿನ ಹುಡುಗಿ ಪ್ರತಿಮೆ ಹಾಗೂ ಇತರೇ ಶಿಲ್ಪಗಳು, ಮಡಿಕೆ ಕುಡಿಕೆಗಳ ಮೇಲೆ ಬರೆದ ಚಿತ್ರಗಳು ಹಾಗೂ ಕುಸುರಿ ಕೆಲಸಕ್ಕೂ ಶ್ರೇಷ್ಠ ನಿದರ್ಶನವಾಗಿದ್ದು, ಆರ್ಯರ ಆಗಮನದ ನಂತರ ಚಿತ್ರಕಲೆ ವಿಕಾಸಗೊಂಡು ಯಜ್ಞಕುಂಡ, ಮದುವೆ ಮಂಟಪ, ಸಭಾಸದನ, ರಂಗೋಲಿಯಂತಹ ಕಲೆಗಳು ವೇದಕಾಲದಲ್ಲಿ ಬೆಳಕಿಗೆ ಬಂದವು. ಚಿತ್ರಕಲೆಯ ಕುರಿತಾಗಿ ಕ್ರಿ.ಪೂ. ೩ನೆಯ ಶತಮಾನದ ವಾತ್ಸಾಯನನ ಕಾಮಸೂತ್ರವು ಚಿತ್ರಕಲೆಯಲ್ಲಿ ಕಲಾವಿದನು ಅರಿಯಬೇಕಾದ ಅಂಶಗಳ ಕುರಿತು ಹೇಳಿದ್ದು, ೧. ರೂಪಭೇದ ೨. ಪ್ರಮಾಣ ೩.ಭಾವ ೪. ಲಾವಣ್ಯ ಯೋಜನೆ ೫. ಸಾದೃಶ್ಯ ೬. ವರ್ಣಿಕಾಭಂಗ ಎಂಬ ಆರು ಅಂಗಗಳ ಕುರಿತು ಹೇಳುತ್ತದೆ. ಈ ಎಲ್ಲ ಅಂಶಗಳನ್ನು ಹೊಂದಿರುವ ಚಿತ್ರ ಭಾರತೀಯ ಚಿತ್ರಕಲೆಯಾಗಿದೆ ಎಂದಿದ್ದು.

ವಿಂಧ್ಯ ಪರ್ವತದ ದಕ್ಷಿಣಕ್ಕಿರುವ ಅಜಂತಾ, ಎಲ್ಲೋರಾ, ಜಗತ್ತಿನ ಕಲಾವಿದರ ಪುಣ್ಯಕ್ಷೇತ್ರಗಳಲ್ಲಿ ಒಂದು. ಇದು ಯಾವ ಬಾಹ್ಯ ಪ್ರಭಾವವೂ ಇಲ್ಲದ ಭಾರತೀಯ ಚಿತ್ರಕಲೆ ಮತ್ತು ಶಿಲ್ಪಕಲೆಯ ತಾಣಗಳಾಗಿದ್ದು, ಅಜಂತಾ ಗುಹೆಗಳ ಭಿತ್ತಿ ಚಿತ್ರಗಳು ಸುಮಾರು ೮೦೦ ವರ್ಷಗಳಿಗೂ ಹೆಚ್ಚಿನ ಕಾಲ ಚಿತ್ರ ರಚಿಸಿದ್ದು ಕಲಾವಿದರ ಪರಿಶ್ರಮದ ಫಲವಾಗಿದೆ. ಕೆಲವು ತಲೆಮಾರಿನ ಚಿತ್ರಗಾರರು ಶಿಲ್ಪಗಾರರು ಇಲ್ಲಿ ದುಡಿದಿದ್ದಾರೆ. ಅಜಂತಾದ ಭಿತ್ತಿಚಿತ್ರಗಳು ಆದಿ ಮಾನವನ ಸೃಷ್ಠಿಯಲ್ಲಿ ಜಗತ್ತಿನ ಸುಖವನ್ನು ತೊರೆದು ಏಕಾಂತದಲ್ಲಿ ಇರಬಯಸಿದ ಬಿಕ್ಕುಗಳು. ತಮಗಾಗಿ ನಿರ್ಮಿಸಿಕೊಂಡ ಕಲಾಪರಿಸರವಾಗಿದೆ.[೨] ಇಲ್ಲಿ ಬಿಕ್ಕುಗಳಲ್ಲದವರೂ ಚಿತ್ರಗಾರರಾಗಿ ದುಡಿದಿರುವರು. ಈ ಭಿತ್ತಿಚಿತ್ರಗಳಲ್ಲಿ ಬುದ್ದನ ಜೀವನ ಹಾಗೂ ಜಾತಕ ಕಥೆಗಳಿಗೆ ಸಂಬಂಧಿಸಿದ ಚಿತ್ರಗಳು ರಚಿಸಲ್ಪಟ್ಟಿದ್ದು, ಕ್ರಿ. ಪೂ. ೭ನೇ ಶತಮಾನದಲ್ಲಿ ಪ್ರಾರಂಭವಾಗಿ ಕ್ರಿ. ಶ. ೬ನೇ ಶತಮಾನದವರೆಗೂ ರಚಿಸಲ್ಪಟ್ಟವು. ಕ್ರಿ. ಶ. ೬ ಮತ್ತು ೭ನೆಯ ಶತಮಾನದಲ್ಲಿ ಕನ್ನಡದ ಚಾಲುಕ್ಯರ ಆಶ್ರಯದಲ್ಲಿ ಅಜಂತಾ ಹಾಗೂ ಬಾದಾಮಿಯ ಗುಹಾಂತರ ದೇವಾಲಯದಲ್ಲಿ ಭಿತ್ತಿಚಿತ್ರಗಳು ರಚಿಸಲ್ಪಟ್ಟಿದ್ದು. ಕ್ರಿ.ಶ.೮ನೆಯ ಶತಮಾನದಿಂದ ಪ್ರಾರಂಭವಾದ ರಾಷ್ಟ್ರಕೂಟರ ಆಳ್ವಿಕೆಯಲ್ಲಿ ಎಲ್ಲೋರಾದಲ್ಲಿಯ ಭಿತ್ತಿಚಿತ್ರಗಳು ಇವೆಲ್ಲಾ ಭಾರತೀಯ ಚಿತ್ರಕಲೆಯ ಹೆಗ್ಗುರುತಾಗಿವೆ.

ಭಾರತೀಯ ಚಿತ್ರಕಲಾ ಇತಿಹಾಸದಲ್ಲಿ ಶಿಷ್ಟಪದ ಚಿತ್ರಗಳು ಅಜಂತಾದ ಭಿತ್ತಿಚಿತ್ರಗಳಿಂದಲೇ ಪ್ರಾರಂಭವಾಗಿದ್ದು. ಈ ಕಲೆಯಲ್ಲಿ ಅದ್ಭುತ ನಾಟಕೀಯ ದೃಶ್ಯಗಳಿವೆ. ಅದರಲ್ಲಿ ದೇವತೆಗಳು, ರಾಜಕುಮಾರರು, ಸಂನ್ಯಾಸಿಗಳು, ಯೋಧರು, ಸಾಮಾನ್ಯ ಸ್ತ್ರೀ ಪುರುಷರು ಹೀಗೆ ಸಮಾಜದ ವಿವಿಧ ಸ್ಥರದವರೆಲ್ಲಾ

೨. ಪ್ರೊ.ಎಂ.ಎಚ್.ಕೃಷ್ಣಯ್ಯ: "ಶೃಂಗಾರ ಲಹರಿ", ಪು.೬.

ಅಲ್ಲಿದ್ದಾರೆ. ಪ್ರಾಣಿ, ಪಕ್ಷಿಗಳು ಅರಮನೆ ನಗರದ ಸೌಧಗಳು, ಬೆಟ್ಟಗುಡ್ಡಗಳು, ಉದ್ಯಾನವನ ಬಯಲುಗಳು ಹಿನ್ನೆಲೆಯಾಗಿವೆ. ಅಜಂತೆಯ ಕಲಾತಂತ್ರಗಳನ್ನು ಗಮನಿಸಿದಾಗ ನಾಟ್ಯಶಾಸ್ತ್ರದ ಬಹುಪಾಲು ಅನುಕರಣೆ ರಚನಾ ವಿಧಾನದಲ್ಲಿ ಕಂಡುಬರುತ್ತದೆ. ಬಣ್ಣಗಳನ್ನು ಬಳಸುವಾಗ ಸಾಂಕೇತಿಕತೆಯನ್ನು ಗಮನದಲ್ಲಿಟ್ಟು ಚಿತ್ರಿಸಿರುವರು. ಆಯಾ ದೇವತೆಗಳಿಗೆ ಪ್ರಾತಿನಿಧಿಕ ಬಣ್ಣಗಳನ್ನು ಬಳಸಿರುವರು. (ಹಳದಿ–ಬ್ರಹ್ಮ, ಕೆಂಪು–ಶಿವ, ನೀಲಿ–ವಿಷ್ಣು) ರಾಜರ ಸೇವಕರು ಉತ್ತರದವರು. ದಕ್ಷಿಣದವರು ಹೀಗೆ ಸೂಕ್ತವರ್ಣಬೇಧಗಳನ್ನು ಕಾಣಬಹುದು. ವರ್ಣಛಾಯೆಗಳ ನಿರೂಪಣೆ, ವಿಧಾನ, ವ್ಯಕ್ತಿಗಳ ಗುಂಪುಗಳನ್ನು ಸಂಯೋಜನಾತ್ಮಕವಾಗಿ ಅಳವಡಿಕೆ ಮಾಡುವ ಜಾಣ್ಮೆ ಹಾಗೂ ವ್ಯಕ್ತಿಗಳಲ್ಲಿಯ ಭಾವನೆಗಳ ಮಿಡಿತವು ಪ್ರಧಾನವಾಗಿದ್ದು, ವ್ಯಕ್ತಿಗಳಲ್ಲಿ ಚೈತನ್ಯ ತುಂಬುವಂತಿದೆ.

ಬಾದಾಮಿಯ ಗುಹಾ ಚಿತ್ರಗಳು ಅಜಂತೆಯ ಗುಹಾಚಿತ್ರಗಳಿಗಿಂತ ಭಿನ್ನವಾಗಿವೆ. ಅಜಂತಾದ ವರ್ಣರೂಪದಲ್ಲಿಯ ನೆರಳು ಬೆಳಕುಗಳ ವಿನ್ಯಾಸಕ್ಕಿಂತಾ ರೇಖೆಗಳಿಗೆ ಹೆಚ್ಚಿನ ಒತ್ತು ಕೊಟ್ಟಿರುವರು. ಉತ್ಪ್ರೇಕ್ಷಿತಗಲ್ಲ, ತುಟಿ, ಆಚೆಗಣ್ಣಿನ ಚಾಚುರೆಪ್ಪೆ ಹಿಗೆ ಹೊಸ ಸಂಪ್ರದಾಯದ ಬದಲಾವಣೆಯ ಸೂಚನೆಗಳು, ಹೆಣ್ಣಿನ ಆದರ್ಶ, ಸೌಂದರ್ಯ, ನೀಳವಾದ ತೆಳು ದೇಹದ ಕಲ್ಪನೆಗಳು ಹೊರಹೊಮ್ಮಿವೆ. ದಪ್ಪವಾದ ಖಚಿತ ರೇಖೆಗಳನ್ನು ಬಳಸಿರುವುದು ಕಂಡುಬರುತ್ತದೆ. ಸಾಂಕೇತಿಕವಾಗಿ ಬಣ್ಣಗಳನ್ನು ಬಳಸುವ ಪದ್ಧತಿಯನ್ನು ಇಲ್ಲಿ ಕೈ ಬಿಡಲಾಗಿದೆ.

ರಾಷ್ಟ್ರಕೂಟರ ಚಿತ್ರಕಲಾ ಶೈಲಿಯು ಬಾದಾಮಿಯ ಕಲಾ ಪರಂಪರೆಯ ಮುಂದಿನ ರೂಪವಾಗಿ ಹೊರಹೊಮ್ಮಿದೆ. ರೇಖೆಗಳಿಗೆ ಹೆಚ್ಚಿನ ಪ್ರಾಶಸ್ತ್ಯವನ್ನು ನೀಡಿದ ಕಲಾವಿದರು. ಬಣ್ಣಗಳಿಗೆ ಅಷ್ಟೊಂದು ಮಹತ್ವ ನೀಡಲಿಲ್ಲ. ಚೆಪ್ಪಟೆಯಾಗಿ ಬಣ್ಣಗಳನ್ನು ಬಳಸಿದ್ದು, ರೇಖೆಗಳು ಶಕ್ತಿಯುತವಾಗಿದ್ದು ಬಾಹ್ಯರೇಖೆಗಳನ್ನಷ್ಟೆ ದೃಢಪಡಿಸುತ್ತವೆ. ಕಣ್ಣುರೆಪ್ಪೆಯು ಕೆನ್ನೆಯಾಚೆಗೆ ಚಾಚಿರುವ ಶೈಲಿ ಸ್ಪಷ್ಟವಾಗಿದ್ದು, ಅಜಂತಾ ಬಾದಾಮಿಯಲ್ಲಿಯ ದುಂಡುಮುಖಗಳು ಇಲ್ಲಿ ಕೋನಾತ್ಮಕ ರೂಪಕ್ಕೆ ಎಡೆಮಾಡಿಕೊಟ್ಟಿರುವುದು ಕಂಡುಬರುತ್ತದೆ. ಚೂಪಾದ ಮೂಗು, ಗಲ್ಲಗಳು ಇಲ್ಲಿಯ ವೈಶಿಷ್ಟ್ಯವಾಗಿವೆ. ಅಜಂತಾದ ಭಿತ್ತಿಚಿತ್ರಗಳು ಮಾನವೀಯತೆಯೊಂದಿಗೆ, ಪ್ರಾಪಂಚಿಕ ವಿಷಯಗಳಿಗೆ ಒತ್ತುಕೊಟ್ಟರೆ, ಎಲ್ಲೋರಾ ಕಲೆ ದೇವತೆಗಳಿಗೆ ಒತ್ತುಕೊಟ್ಟು ಚಿತ್ರಿಸಲಾಗಿದೆ.[೩] ಈ ಎಲ್ಲ ಅಂಶಗಳನ್ನು ಪ್ರಮುಖವಾಗಿಟ್ಟುಕೊಂಡು ಬೆಳೆದುಬಂದ ವಿಜಯನಗರ ಕಲೆಯು ಜನಜೀವನದ ವಾಸ್ತವ ಬದುಕಿಗೆ ಒತ್ತುಕೊಟ್ಟು, ಭಿತ್ತಿಚಿತ್ರಗಳು, ರಚನೆಗೊಂಡವು. ಸಮಕಾಲೀನ ಅಂಶಗಳನ್ನು, ಸಂದರ್ಭ, ಘಟನೆ, ಸನ್ನಿವೇಶ, ವಸ್ತುಗಳನ್ನು ವಾಸ್ತವಿಕವಾಗಿ ಚಿತ್ರಿಸುವ ಹೊಸ ಸಂಪ್ರದಾಯವನ್ನು ಹುಟ್ಟು ಹಾಕಿದ ವಿಜಯನಗರ ಭಿತ್ತಿಚಿತ್ರಕಲಾವಿದರು. ಇಡೀ ದಕ್ಷಿಣ ಭಾರತದಲ್ಲೆಲ್ಲಾ ವಿಜಯನಗರ ಕಲಾಶೈಲಿಯು

೩. ಪ್ರೊ.ಎಂ.ಎಚ್.ಕೃಷ್ಣಯ್ಯ: "ಶೃಂಗಾರ ಲಹರಿ", ಪು.೫೮.

ಜನಪ್ರಿಯವಾಗಿ ಬೆಳೆದು ಬಂದಿರುವುದಕ್ಕೆ ಕಾರಣೀಭೂತರಾದರು. ನಂತರದ ಅವಧಿಯಲ್ಲಿ ಉತ್ತರ ಕರ್ನಾಟಕದಲ್ಲಿ ದಖ್ಖನ್ ಕಲೆಯು ಹುಟ್ಟಿಕೊಂಡಿತು. ಇದು ಪರ್ಷಿಯನ್ ಮತ್ತು ತುರ್ಕಿ ಕಲೆಯ ಪ್ರಭಾವದಿಂದ ಪ್ರಾರಂಭವಾಗಿ ವಿಜಯನಗರ ಕಲೆಯೊಂದಿಗೆ ಬೆರೆತಾಗ ದಖ್ಖನ್ ಶಿಷ್ಟಪದ ಕಲೆಯಾಗಿ ರೂಪುಗೊಂಡಿತು. ಇದು ವಿಜಯನಗರ ಕಲಾಶೈಲಿಯಷ್ಟೆ ಪ್ರಬಲವಾಗಿರುವ ದಖ್ಖನ್ ಕಲೆ. ಉತ್ತರ ಕರ್ನಾಟಕದಾದ್ಯಂತ ದಟ್ಟ ಪ್ರಭಾವದೊಂದಿಗೆ ಹರಡಿದರೆ, ದಕ್ಷಿಣ ಕರ್ನಾಟಕದಲ್ಲೂ ವಿಜಯನಗರ ಕಲೆಯೊಂದಿಗೆ ದಖ್ಖನ್ ಕಲೆಯ ಅಂಶಗಳು ಸೇರಿಕೊಂಡಿರುವ ಕಲಾಕೃತಿಗಳು ನಿರ್ಮಾಣಗೊಂಡವು. ಇಡೀ ಕರ್ನಾಟಕದ ಭಿತ್ತಿ ಚಿತ್ರಗಳಲ್ಲಿ ವಿಜಯನಗರ ಕಲಾಶೈಲಿ ಮತ್ತು ದಖ್ಖನ್ ಕಲಾಶೈಲಿಗಳು ಶಕ್ತಿಯುತವಾಗಿ ಮೂಡಿಬಂದಿವೆ. ಇವುಗಳ ಜೊತೆಗೆ ಮೊಘಲ್, ರಜಪೂತ ಕಲೆಗಳು ಇವುಗಳೊಂದಿಗೆ ಪಾಶ್ಚಾತ್ಯ ಕಲೆಯ ಪ್ರಭಾವವೂ ಒಂದೆಡೆ ಆದರೆ ಇನ್ನೊಂದೆಡೆ ಸ್ಥಳೀಯ ಪ್ರಭಾವಗಳೂ ಭಿತ್ತಿಚಿತ್ರಗಳಲ್ಲಿ ಪ್ರಮುಖವಾಗಿ ಕಂಡುಬರುತ್ತವೆ. ಉತ್ತರ ಕರ್ನಾಟಕದಲ್ಲಿ ಮರಾಠಾ ಕಲಾಶೈಲಿ, ಸುರಪೂರ ಕಲಾಶೈಲಿಗಳು ಪ್ರಮುಖವಾಗಿ ಕಂಡುಬಂದಿದ್ದು, ದಕ್ಷಿಣ ಕರ್ನಾಟಕದಲ್ಲಿ ಮೈಸೂರು ಕಲಾ ಶೈಲಿ, ತಂಜಾವೂರು ಕಲಾಶೈಲಿಗಳು ಪ್ರಮುಖವಾಗಿ ಕಂಡುಬರುತ್ತವೆ. ಇದೇ ಅವಧಿಯಲ್ಲಿ ರಚನೆಗೊಂಡಿರುವ ಉತ್ತರ ಕರ್ನಾಟಕದ ನಿಪ್ಪಾಣಿ ವಾಡೆ ಭಿತ್ತಿಚಿತ್ರಗಳು ಅಷ್ಟೇ ಪ್ರಮುಖವಾಗಿವೆ. ಅವುಗಳ ವಸ್ತು, ವಿಷಯ, ತಂತ್ರ, ಶೈಲಿಗಳು ಸಮಕಾಲೀನ ಸಂದರ್ಭ, ಸನ್ನಿವೇಶ ಘಟನೆಗಳ ಕುರಿತು ಇಲ್ಲಿ ಅಧ್ಯಯನ ಮಾಡುವ ಉದ್ದೇಶವನ್ನು ಹೊಂದಲಾಗಿದೆ.

ಬಾದಾಮಿಯ ಪರಿಸರದಲ್ಲಿನ ಶಿಲಾಶ್ರಯತಾಣದ ಶಿಷ್ಟಪದ ಭಿತ್ತಿಚಿತ್ರಗಳು ಚಾಲುಕ್ಯರ ಪ್ರಾರಂಭಿಕ ರಚನೆಗಳೆಂದು ಅಭಿಪ್ರಾಯಪಟ್ಟಿರುವ ಡಾ.ಯಾದಪ್ಪ ಪರದೇಶಿಯವರು[೪] ಬಹುಶಃ ನಮ್ಮ ಕನ್ನಡ ನಾಡಿನ ಪ್ರಾರಂಭಿಕ ಶಿಷ್ಟಪದ ಚಿತ್ರಗಳೂ ಇವೇ ಆಗಿವೆ. ನಂತರದ ಅವಧಿಯಲ್ಲಿ ಮಾನವ ನಿರ್ಮಿತ ಗುಹೆ, ದೇವಾಲಯ, ಅರಮನೆ, ವಾಡೆ, ಚರ್ಚು, ಮಸೀದಿಗಳಲ್ಲಿ, ಮನೆಗಳಲ್ಲಿ ಹೀಗೆ ಭಿತ್ತಿ ಚಿತ್ರಗಳು ಬೆಳೆದು ಬಂದಿದ್ದು, ಮಾನವನ ಸಂಸ್ಕೃತಿಯ ಒಂದು ಭಾಗವಾಗಿಯೇ ಚಿತ್ರಕಲೆ ಇತರ ಆಕಾರಗಳಿಗಿಂತ ಬೇರೆಯಾಗಿ ಇದು ನಮ್ಮ ಸಾಂಸ್ಕೃತಿಕ ಇತಿಹಾಸವನ್ನು ಪುನರ್ ರಚಿಸಲು ಹೇಗೆ ಸಹಾಯ ಮಾಡುತ್ತದೆ ಎಂಬುದನ್ನು ತಿಳಿದುಕೊಳ್ಳಬಹುದಾಗಿದೆ. ಭಿತ್ತಿಚಿತ್ರಕಲಾ ಪರಂಪರೆಯನ್ನು ನಮ್ಮ ಪೂರ್ವಜರು ಧರ್ಮಪ್ರಚಾರದ ಸಾಧನವಾಗಿ, ಸಮಾಜವನ್ನು ರೂಪಿಸುವಲ್ಲಿ ಮನರಂಜನೆಗಾಗಿ, ವಯಕ್ತಿಕ ಭಾವನೆಗಳ ಕಲಾತ್ಮಕ ಅಭಿವ್ಯಕ್ತಿಗಾಗಿ, ರಾಜಕೀಯ ಉದ್ದೇಶಗಳಿಗಾಗಿ ಹೇಗೆ ಬಳಸಿಕೊಂಡಿರುವರು ಎಂಬುದನ್ನು ನೋಡುವುದರ ಜೊತೆಗೆ ಭಿತ್ತಿಚಿತ್ರಗಳ ಶೈಲಿ ಕಾಲದಿಂದ ಕಾಲಕ್ಕೆ ಬದಲಾಗಿರುವುದು ಚಿತ್ರಗಳ ಶೈಲಿ, ತಂತ್ರ, ವಿನ್ಯಾಸ, ಚಿತ್ರರಚನಾ ಸಂಯೋಜನೆ ಈ ತಾಂತ್ರಿಕತೆಯ ವಿಚಾರಗಳನ್ನು ತಿಳಿದುಕೊಳ್ಳಲು ಪ್ರಸ್ತುತ ಅಧ್ಯಯನವು ತುಂಬಾ ಮಹತ್ವದ್ದಾಗಿದೆ.

---

೪. ಡಾ.ಯಾದಪ್ಪ ಪರದೇಶಿ: ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ– ಪಿಎಚ್.ಡಿ. ಮ.ಪ್ರ.ಕನ್ನಡ ವಿ.ವಿ.ಹಂಪಿ, ೨೦೦೧.

ಕಲೆಗಳು ಆ ಭಾಗದ ಮೂಲ ಸಂಸ್ಕೃತಿಯೊಂದರ ಕಡೆಗೆ ಬೆರಳುಮಾಡುತ್ತ ಇತಿಹಾಸದ ಹಲವು ಕಾಲಘಟ್ಟಗಳಲ್ಲಿ ನಡೆದಿರಬಹುದಾದ ಸಾಂಸ್ಕೃತಿಕ ಸಂಘರ್ಷಗಳ ಕಡೆಗೆ ನಮ್ಮ ಗಮನ ಸೆಳೆಯುತ್ತವೆ. ಯಾವುದೇ ಒಂದು ಸಂಸ್ಕೃತಿ ತನ್ನ ಸಾಮಾಜಿಕ ಬದಲಾವಣೆಯಲ್ಲಿ ಅನೇಕ ಆಯಾಮಗಳನ್ನು ಪಡೆದು ಹೊಸ, ಹೊಸ ನೆಲೆಗಳನ್ನು ಕಂಡುಕೊಳ್ಳುತ್ತಲೇ ಪರಂಪರೆಗೆ ವಿವಿಧ ಮುಖಗಳ ಬದಲಾವಣೆಯನ್ನೂ ಸೇರಿಸುತ್ತದೆ. ಕಲಾ ಪ್ರಕಾರಗಳು ಅವುಗಳ ಅಭಿವ್ಯಕ್ತಿಯ ರೂಪಗಳು ಇಲ್ಲಿ ಪುರಾವೆಗಳಾಗಿ ಉಳಿಯುತ್ತವೆ. ಹೀಗೆ ಕನ್ನಡಿಗರ ಸಾಂಸ್ಕೃತಿಕ ಜೀವನದ ಕಲಾತ್ಮಕ ಬದುಕನ್ನು ಕಂಡುಕೊಳ್ಳುವುದರತ್ತ ಗಮನಹರಿಸಬಹುದಾಗಿದೆ. ನಮ್ಮ ಪ್ರಾಚೀನರ ಈ ಅಮೂಲ್ಯ ಸಾಂಸ್ಕೃತಿಕ ಸಂಪತ್ತು ದಿನದಿಂದ ದಿನಕ್ಕೆ ನಾಶವಾಗುತ್ತಿರುವ ಈ ಸಂದರ್ಭದಲ್ಲಿ ಇವುಗಳ ವ್ಯಾಪಕ ಅಧ್ಯಯನದ ಅವಶ್ಯಕತೆ ಇಂದು ತುಂಬಾ ಮಹತ್ವದ್ದಾಗಿದೆ..

ಹೀಗೆ ಒಂದು ನಾಡಿನ ಸಂಸ್ಕೃತಿಯನ್ನು ತಿಳಿಯಲು ಚಿತ್ರಕಲೆಯು ಒಂದು ಪ್ರಮುಖ ಮಾಧ್ಯಮವಾಗಿದ್ದು, ಆ ದಿಶೆಯಲ್ಲಿ ಚಿತ್ರಕಲೆಯ ಮುಖಾಂತರ ಮಾನವ ತನ್ನ ಸಂಸ್ಕೃತಿಯನ್ನು ಹೇಗೆ ವ್ಯಕ್ತಗೊಳಿಸಿದ್ದಾನೆ? ಎಂಬುದನ್ನು ಅರಿಯುವುದೂ ಕೂಡಾ ಪ್ರಸ್ತುತ ಅಧ್ಯಯನದ ಉದ್ದೇಶವಾಗಿದೆ. ಭಿತ್ತಿಚಿತ್ರಗಳು ನಮ್ಮ ನಾಡಿನ ಸಾಂಸ್ಕೃತಿಕ ಪರಂಪರೆಗೆ ಕೊಟ್ಟಂತಹ ಕೊಡುಗೆ ಅಪಾರ. ಅಲ್ಲದೇ ನಾಡಿನ ಇತಿಹಾಸ ತಿಳಿಯುವಲ್ಲಿ ತಮ್ಮದೇ ಆದ ಪಾತ್ರವನ್ನು ನಿರ್ವಹಿಸಿವೆ ಎನ್ನಬಹುದು. ಹೀಗೆ ಭಾರತೀಯ ಚಿತ್ರಕಲಾಪರಂಪರೆಯಲ್ಲಿ ಕರ್ನಾಟಕದ ಭಿತ್ತಿಚಿತ್ರಗಳಿಗೆ ತನ್ನದೇ ಆದ ಮಹತ್ವದ ಸ್ಥಾನವಿದೆ. ಕನ್ನಡನಾಡಿನ ಜನತೆ ಭಿತ್ತಿಚಿತ್ರಗಳನ್ನು ರಚಿಸುವ ಮೂಲಕ ಕಲಾವಿದರಾಗಿ, ಭಿತ್ತಿ ಚಿತ್ರ ನಿರ್ಮಾಣ ಪರಂಪರೆಯನ್ನು ಜೀವಂತವಾಗಿಸುವುದರೊಂದಿಗೆ ನಮ್ಮ ನಾಡನ್ನು ಸಂಪದ್ಭರಿತವಾಗಿ ಮಾಡಿದ್ದಾರೆ. ಇದರಿಂದ ಆಯಾ ಕಾಲದ ಕಲೆಯ ತಾಂತ್ರಿಕ ಬೆಳವಣಿಗೆ, ಗುಣಮಟ್ಟ, ಪ್ರಭಾವ ಇತ್ಯಾದಿಯಾಗಿ ಐತಿಹಾಸಿಕ ಅಂಶಗಳನ್ನು ಕಂಡುಕೊಳ್ಳಬಹುದು. "ಕಲಾವಿದ ತನಗೆ ಅರಿವಿಲ್ಲದಂತೆಯೇ ತನ್ನ ಕಾಲದ ಸಮಾಜವನ್ನು ಚಿತ್ರಿಸಿದ್ದು ಇದು ಸಾಮಾಜಿಕ ಅಧ್ಯಯನಕ್ಕೆ ಅಪೂರ್ವ ಕೊಡುಗೆಯಾಗುತ್ತದೆ. ಎನ್ನುವ ಡಾ.ಅ.ಲ.ನರಸಿಂಹನ್"[೫] ಅವರ ಅಭಿಪ್ರಾಯವಾಗಲಿ ಹಾಗೂ "ಕಲೆ ಒಂದು ಕಾಲದ, ಒಂದು ದೇಶದ, ಒಂದು ಜನಾಂಗದ ಹೃದಯವನ್ನು ಮಿಡಿಯುತ್ತದೆ. ಜನತೆಯ ಆಶೆ, ಆಕಾಂಕ್ಷೆಗಳನ್ನು ಮನೋಭಾವನೆಗಳನ್ನು ಅವರು ಬದುಕಿ ಬಾಳಿದ ರೀತಿಯನ್ನು ಬಿಂಬಿಸುತ್ತದೆ. ಅವರು ನಂಬಿದ್ದ ಜೀವನ ಮೌಲ್ಯಗಳನ್ನು ಸೂಚಿಸುತ್ತದೆ" ಎನ್ನುವ ಡಾ.ಎಸ್.ಸಿ.ಪಾಟೀಲ[೬] ಅವರ ಮಾತುಗಳು ವಾಸ್ತವ ನೆಲೆಯಲ್ಲಿ ಮೂಡಿಬಂದಿವೆ.

ಈ ಹಿನ್ನೆಲೆಯಲ್ಲಿ ನಿಪ್ಪಾಣಿವಾಡೆ ಭಿತ್ತಿಚಿತ್ರಗಳನ್ನು ಅಧ್ಯಯನ ಮಾಡುವಾಗ ಕಲೆಯ ವಿವಿಧ ಪ್ರಕಾರಗಳು ಕುತೂಹಲಕಾರಿಯಾಗಿ ಕಂಡುಬಂದಿದ್ದು, ಪ್ರಸ್ತುತ ಅಧ್ಯಯನವು ನಿಪ್ಪಾಣಿವಾಡೆ ಭಿತ್ತಿಯಲ್ಲಿರುವ

---

೫. ಡಾ.ಅ.ಲ.ನರಸಿಂಹನ್: ಆಲೇಖ್ಯ, ಪು.

೬. ಡಾ.ಎಸ್.ಸಿ.ಪಾಟೀಲ: ಕರ್ನಾಟಕದ ಜನಪದ ಚಿತ್ರಕಲೆ.

ವರ್ಣಚಿತ್ರಗಳ ಕುರಿತಾಗಿದ್ದು, ನಾಡಿನ ಸಾಂಸ್ಕೃತಿಕ ಇತಿಹಾಸ ರಚಿಸುವಲ್ಲಿ ಈ ಚಿತ್ರಕಲೆ ತನ್ನದೇ ಆದ ಪಾತ್ರವಹಿಸಿದೆ.

ನಮ್ಮ ಪ್ರಾಚೀನರ ಈ ಅಮೂಲ್ಯ ಸಾಂಸ್ಕೃತಿಕ ಸಂಪತ್ತು ದಿನದಿಂದ ದಿನಕ್ಕೆ ನಾಶವಾಗುತ್ತಿರುವ ಈ ಸಂದರ್ಭದಲ್ಲಿ ಇವುಗಳ ವ್ಯಾಪಕ ಅಧ್ಯಯನದ ಅವಶ್ಯಕತೆ ಇಂದು ತುಂಬ ಮಹತ್ವದ್ದಾಗಿದ್ದು, ಈ ಉದ್ದೇಶ ಈಡೇರಿಸುವ ನಿಟ್ಟಿನಲ್ಲಿ ಪ್ರಸ್ತುತ ಅಧ್ಯಯನ ಒಂದು ಪುಟ್ಟ ಪ್ರಾಮಾಣಿಕ ಪ್ರಯತ್ನವಾಗಿದೆ. ಪ್ರಸ್ತುತ ಅಧ್ಯಯನದ ವಿಷಯ ಕುರಿತು ಕೆಲವೇ ಕೆಲವು ಸಂಶೋಧನಾ ಲೇಖನಗಳು ಬಂದಿದ್ದು, ಈ ಲೇಖನಗಳು ಭಿತ್ತಿಚಿತ್ರಗಳ ಕುರಿತು ಮಾಹಿತಿ ಒದಗಿಸುತ್ತವೆ. ಆದರೂ ನಿಪ್ಪಾಣಿವಾಡೆ ಭಿತ್ತಿಚಿತ್ರಗಳ ಕುರಿತು ಸಮಗ್ರ ಅಧ್ಯಯನ, ರಚನಾ ವಿಧಾನ, ತಂತ್ರ, ಶೈಲಿ, ವಿಷಯ, ವಸ್ತು ಚಿತ್ರಗಳ ಸಂರಕ್ಷಣಾಕ್ರಮ ಮತ್ತು ಆಪತ್ತುಗಳ ಕುರಿತು ಒಂದೆಡೆ ದಾಖಲಿಸುವ ಹಾಗೂ ಸಂಗ್ರಹಿಸುವ ಅಧ್ಯಯನವೊಂದರ ಅವಶ್ಯಕತೆ ಇದ್ದುದನ್ನು ಗಮನಿಸಿ, ಪ್ರಸ್ತುತ ಅಧ್ಯಯನವನ್ನು ಕೈಕೊಳ್ಳಲಾಗಿದೆ.

**ಚಿತ್ರಕಲಾ ಕ್ಷೇತ್ರದಲ್ಲಿ ಇಲ್ಲಿಯವರೆಗೆ ನಡೆದ ಅಧ್ಯಯನಗಳು:**

ಕರ್ನಾಟಕದ ಚಿತ್ರಕಲಾ ಕ್ಷೇತ್ರದಲ್ಲಿ ಹೆಚ್ಚಿನ ಸಂಶೋಧನಾ ಅಧ್ಯಯನಗಳು ನಡೆದಿಲ್ಲವೆಂದೇ ಹೇಳಬಹುದಾಗಿದೆ. ಏಕೆಂದರೆ ವಿಶ್ವವಿದ್ಯಾಲಯಗಳ ಮಟ್ಟದಲ್ಲಿ ಚಿತ್ರಕಲಾ ಅಧ್ಯಯನಗಳು ನಡೆದಿರುವುದು ತೀರಾ ಇತ್ತೀಚೆಗಷ್ಟೆ. ೧೯೭೪ರ ದಶಕದಿಂದ ಪ್ರಾರಂಭವಾಗಿ ೧೯೯೦ರ ದಶಕದಲ್ಲಿ ಈ ಅಧ್ಯಯನಗಳು ತೀವ್ರಗೊಂಡು ಈಗ ಪ್ರೌಢಾವಸ್ಥೆಗೆ ಬಂದು ತಲುಪಿವೆ. ಕರ್ನಾಟಕದಲ್ಲಿ ನಡೆದ ದೃಶ್ಯಕಲಾ ಸಂಶೋಧನಾ ಅಧ್ಯಯನಗಳ ಸ್ಥೂಲವಾದ ವಿವರವನ್ನು ಈ ಕೆಳಗೆ ಸಮೀಕ್ಷಿಸಿಕೊಡಲಾಗಿದೆ.

೧೯೭೪ರ ದಶಕದಲ್ಲಿ ಕರ್ನಾಟಕದ ದೃಶ್ಯಕಲಾ ಕ್ಷೇತ್ರದಲ್ಲಿ ಮೊದಲಬಾರಿಗೆ ವಿಶ್ವವಿದ್ಯಾಲಯಮಟ್ಟದಲ್ಲಿ ಚಿತ್ರಕಲೆಯ ಕುರಿತು ಸಂಶೋಧನಾತ್ಮಕ ಅಧ್ಯಯನ ಪ್ರಾರಂಭಗೊಂಡಿರುವುದು ಕಂಡುಬರುತ್ತದೆ. ಡಾ.ಎಸ್.ಸಿ.ಪಾಟೀಲರು ೧೯೮೩ರಲ್ಲಿ ಕರ್ನಾಟಕ ವಿ.ವಿ.ಯ ಸ್ನಾತಕೋತ್ತರ ಶಿಕ್ಷಣ ವಿಭಾಗಕ್ಕೆ ಮಂಡಿಸಿದ **ಮಾಧ್ಯಮಿಕ ಶಾಲಾ ಶಿಕ್ಷಣದಲ್ಲಿ ಚಿತ್ರಕಲಾ ಶಿಕ್ಷಣ: ಒಂದು ಅಧ್ಯಯನ**[೭] ಎಂಬ ಸಂಶೋಧನಾ ಕಿರುಪ್ರಬಂಧವು ಈ ಕ್ಷೇತ್ರದ ಪ್ರಥಮ ಅಧ್ಯಯನವಾಗಿದೆ. ೧೯೮೭ರಲ್ಲಿ ಡಾ.ಬಿ.ಕೆ. ಹಿರೇಮಠ ಅವರು **ಕನ್ನಡ ಹಸ್ತಪ್ರತಿಗಳು ಒಂದು ಅಧ್ಯಯನ**[೮] ಎಂಬ ಪಿಎಚ್.ಡಿ.ಮಹಾಪ್ರಬಂಧದಲ್ಲಿ ಹಸ್ತಪ್ರತಿ ಚಿತ್ರಕಲೆ ಕುರಿತಂತೆ ಕೆಲವು ಅಧ್ಯಾಯಗಳಲ್ಲಿ ಅಧ್ಯಯನ ಮಾಡಿದ್ದಾರೆ. ೧೯೯೧ರಲ್ಲಿ ಕರ್ನಾಟಕದ ಜನಪದ ಚಿತ್ರಕಲೆಯನ್ನೇ ಸಂಶೋಧನೆಯ ಮುಖ್ಯ ವಿಷಯವನ್ನಾಗಿಟ್ಟುಕೊಂಡು ಕರ್ನಾಟಕ ವಿ.ವಿ.ಗೆ ಮಂಡಿಸಿದ ಪಿಎಚ್.ಡಿ. ಮಹಾಪ್ರಬಂಧ **ಕರ್ನಾಟಕದ**

೭. ಡಾ.ಎಸ್.ಸಿ.ಪಾಟೀಲ: ಮಾಧ್ಯಮಿಕ ಶಾಲಾ ಶಿಕ್ಷಣದಲ್ಲಿ ಚಿತ್ರಕಲಾ ಶಿಕ್ಷಣ, ಕರ್ನಾಟಕ ವಿ.ವಿ., ೧೯೮೩.
೮. ಡಾ.ಬಿ.ಕೆ.ಹಿರೇಮಠ: ಕನ್ನಡ ಹಸ್ತಪ್ರತಿಗಳು, ಪಿಎಚ್.ಡಿ.ಮ.ಪ್ರ. ಕರ್ನಾಟಕ ವಿ.ವಿ., ೧೯೮೭.

**ಜನಪದ ಚಿತ್ರಕಲೆ**[೯] ಈ ಮಹಾಪ್ರಬಂಧವನ್ನು ಡಾ.ಎಸ್.ಸಿ.ಪಾಟೀಲರು ಸಿದ್ಧಪಡಿಸಿದ್ದು ನಮ್ಮ ದೃಶ್ಯ ಕಲಾಕ್ಷೇತ್ರದ ಮೊದಲ ಅಧ್ಯಯನ ಎಂಬ ಹೆಗ್ಗಳಿಕೆಗೆ ಪಾತ್ರವಾಗಿದೆ. ನಂತರದ ದಿನಗಳಲ್ಲಿ ೧೯೯೫ರಲ್ಲಿ ಡಾ.ಅ.ಲ.ನರಸಿಂಹನ್ ಅವರು ಬೆಂಗಳೂರು ವಿ.ವಿ.ಗೆ ಮಂಡಿಸಿದ ಪಿಎಚ್.ಡಿ. ಮಹಾಪ್ರಬಂಧ **ಕರ್ನಾಟಕದ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು**[೧೦] ಎಂಬುದಾಗಿದೆ. ೧೯೯೭ರಲ್ಲಿ ಡಾ.ಸಂಪದಾ ಭಟ್ ಅವರ **ಹಿಂದೂಸ್ಥಾನಿ ಸಂಗೀತ ಹಾಗೂ ರಾಗಮಾಲಾ ಚಿತ್ರಗಳು**[೧೧] ಬೆಂಗಳೂರು ವಿಶ್ವವಿದ್ಯಾಲಯಕ್ಕೆ ೧೯೯೭ರಲ್ಲಿ ಡಾ.ಪುಷ್ಪಾ ದ್ರಾವಿಡ ಇವರ **ಅನಿವಾಸಿ ಭಾರತೀಯ ಕಲಾವಿದ ದಿ.ನಿಕೋಲಸ್ ರೋರಿಕ್ ಜೀವನ ಮತ್ತು ಕಲಾಕೃತಿಗಳು**[೧೨] ಬೆಂಗಳೂರು ವಿಶ್ವವಿದ್ಯಾಲಯಕ್ಕೆ, ೨೦೦೧ರಲ್ಲಿ ಡಾ.ಯಾದಪ್ಪ ಪರದೇಶಿಯವರ **ಉತ್ತರ ಕರ್ನಾಟಕದ ಭಿತ್ತಿ ಚಿತ್ರಕಲೆ ಒಂದು ಅಧ್ಯಯನ**[೧೩] ಕನ್ನಡ ವಿ.ವಿ.ಹಂಪಿಗೆ ೨೦೦೨ ರಲ್ಲಿ ಡಾ.ಶಿವಾನಂದ ಬಂಟನೂರು ಇವರು **ಕರ್ನಾಟಕದ ಜನಪದ ಶಿಲ್ಪಕಲೆ ಒಂದು ಅಧ್ಯಯನ**[೧೪] ಕನ್ನಡ ವಿ.ವಿ.ಹಂಪಿಗೆ ೨೦೦೨ ರಲ್ಲಿ ಡಾ.ಗಿರೀಶ್ ಅವರ **ಬುಡಕಟ್ಟು ಚಿತ್ರಕಲೆ**[೧೫] ಕನ್ನಡ ವಿ. ವಿ. ಹಂಪಿಗೆ ೨೦೦೨ ರಲ್ಲಿ ಡಾ. ಲಕ್ಷ್ಮೀದೇವಿ ಗವಾಯಿ **ಕಲಾವಿದ ಎಂ. ಎ. ಚೆಟ್ಟಿಯವರ ಜೀವನ ಕಲಾಕೃತಿಗಳು ಒಂದು ಅಧ್ಯಯನ**[೧೬] ಕನ್ನಡ ವಿ.ವಿ.ಹಂಪಿಗೆ ೨೦೦೨ ರಲ್ಲಿ ಡಾ.ಶರಣಪ್ಪ ಕೋಲ್ಕಾರ ಅವರ **ಕೊಪ್ಪಳ ಹಂಪಿ ಪ್ರದೇಶದ ಪ್ರಾಗೈತಿಹಾಸಿಕ ಕಾಲದ ಕಲೆ**[೧೭] ಕನ್ನಡ ವಿ. ವಿ. ಹಂಪಿಗೆ ೨೦೦೨ ರಲ್ಲಿ ಡಾ.ಸೌಮ್ಯ ಅವರ **ಯಂತ್ರಾ ದ ವಿಜುವಲ್ ಆಫ್ ಶಂಕರಾ ಫಿಲಾಸಫಿ ವಿತ್ ರೆಫರನ್ಸ್ ಟು ಕಾಂಟೆಂಪ್ರರಿ ತಾಂತ್ರಿಕ ಆರ್ಟಿಸ್ಟ್**[೧೮] ಬೆಂಗಳೂರು

---

೯. ಡಾ.ಎಸ್.ಸಿ.ಪಾಟೀಲ: ಕನ್ನಡ ಹಸ್ತಪ್ರತಿಗಳು, ಪಿಎಚ್.ಡಿ.ಮ.ಪ್ರ., ೧೯೯೧.

೧೦. ಡಾ.ಅ.ಲ.ನರಸಿಂಹನ್: ಕರ್ನಾಟಕದ ಚಿತ್ರಕಲೆಯಲ್ಲಿ ಸಾಂಸ್ಕೃತಿಕ ಅಂಶಗಳು, ಪಿಎಚ್.ಡಿ.ಮ.ಪ್ರ., ಬೆಂಗಳೂರು ವಿ.ವಿ., ೧೯೯೮.

೧೧. ಡಾ.ಸಂಪದಾ ಭಟ್: ಹಿಂದೂಸ್ಥಾನಿ ಸಂಗೀತ ಹಾಗೂ ರಾಗಮಾಲಾ ಚಿತ್ರಗಳು, ಪಿಎಚ್.ಡಿ.ಮ.ಪ್ರ., ಕನ್ನಡ ವಿ.ವಿ., ೧೯೯೮.

೧೨. ಡಾ.ಪುಷ್ಪಾ ದ್ರಾವಿಡ: ಅನಿವಾಸಿ ಭಾರತೀಯ ಕಲಾವಿದ ದಿ.ನಿಕೋಲಸ್ ರೋರಿಕ ಜೀವನ ಮತ್ತು ಕಲಾಕೃತಿಗಳು, ಪಿಎಚ್.ಡಿ.ಮ.ಪ್ರ., ಬೆಂಗಳೂರು ವಿ.ವಿ., ೧೯೯೭.

೧೩. ಡಾ.ಯಾದಪ್ಪ ಪರದೇಶಿ: ಉತ್ತರ ಕರ್ನಾಟಕದ ಭಿತ್ತಿ ಚಿತ್ರಕಲೆ, ಪಿಎಚ್.ಡಿ.ಮ.ಪ್ರ., ಕನ್ನಡ ವಿ.ವಿ., ೨೦೦೦.

೧೪. ಡಾ.ಶಿವಾನಂದ ಬಂಟನೂರು: ಕರ್ನಾಟಕದ ಜನಪದ ಶಿಲ್ಪಕಲ–ಒಂದು ಅಧ್ಯಯನ, ಪಿಎಚ್.ಡಿ.ಮ.ಪ್ರ., ಕನ್ನಡ ವಿ.ವಿ., ೨೦೦೨.

೧೫. ಡಾ.ಗಿರೀಶ: ಬುಡಕಟ್ಟು ಚಿತ್ರಕಲೆ, ಪಿಎಚ್.ಡಿ.ಮ.ಪ್ರ., ಕನ್ನಡ ವಿ.ವಿ., ೨೦೦೨.

೧೬. ಡಾ.ಲಕ್ಷ್ಮೀದೇವಿ ಗವಾಯಿ: ಕಲಾವಿದ ಎಂ.ಎ.ಚೆಟ್ಟಿಯವರ ಜೀವನ, ಕಲಾಕೃತಿಗಳು–ಒಂದು ಅಧ್ಯಯನ, ಪಿಎಚ್.ಡಿ.ಮ.ಪ್ರ., ಕನ್ನಡ ವಿ.ವಿ., ೨೦೦೨.

೧೭. ಡಾ.ಶರಣಪ್ಪ ಕೋಲ್ಕಾರ: ಅವರ ಕೊಪ್ಪಳ–ಹಂಪಿ ಪ್ರದೇಶದ ಪ್ರಾಗಿತಿಹಾಸಿಕ ಕಾಲದ ಕಲೆ, ಪಿಎಚ್.ಡಿ.ಮ.ಪ್ರ., ಕನ್ನಡ ವಿ.ವಿ., ೨೦೦೨.

೧೮. ಡಾ.ಸೌಮ್ಯ: ಯಂತ್ರಾ ದಿ ಯಜುಮ್ ಆಫ್ ಶಂಕರಾ ಫಿಲಾಸಫಿ ವಿತ್ ರೆಫೆರನ್ಸ್ ಟು ಕಾಂಟೆಂಪರರಿ ತಾಂತ್ರಿಕಾ ಆರ್ಟಿಸ್ಟ್, ಪಿಎಚ್.ಡಿ.ಮ.ಪ್ರ., ಬೆಂಗಳೂರು ವಿ.ವಿ., ೨೦೦೨.

ವಿ.ವಿ.ಗೆ ೨೦೦೨ರಲ್ಲಿ ಡಾ.ಪ್ರಮೀಳಾ ಲೋಚನ ಅವರ **ಮೈಂಡ್ ಮ್ಯೂಜಿಕ್ ಆಂಡ್ ಕಲರ್ ಎಕ್ಸ್ಪ್ಲೋಜಿಸ್**[೧೯] ಬೆಂಗಳೂರು ವಿ.ವಿ.ಗೆ ೨೦೦೩ ರಲ್ಲಿ ಡಾ.ವೀಣಾ ಶೇಖರ್ ಅವರ **ಎ ಸ್ಟಡಿ ಆಫ್ ಹಿಸ್ಟಾರಿಕಲ್ ಪೇಂಟಿಂಗ್ ಆಫ್ ಕರ್ನಾಟಕ**[೨೦] (೧೭೮೦-೧೯೨೦). ಬೆಂಗಳೂರು ವಿ.ವಿ.ಗೆ ೨೦೦೩ರಲ್ಲಿ ಡಾ.ಸಿದ್ಧಲಿಂಗಸ್ವಾಮಿ ಹಿರೇಮಠ ಅವರ **ಕಲಾವಿದ ಆರ್. ಎಂ. ಹಡಪದ ಒಂದು ಅಧ್ಯಯನ**[೨೧] ಕನ್ನಡ ವಿ. ವಿ. ಹಂಪಿಗೆ ೨೦೦೩ ರಲ್ಲಿ ಡಾ.ಎಸ್.ಸಿ.ಪಾಟೀಲ ಅವರ ಕರ್ನಾಟಕ ವಿ. ವಿ. ಗೆ ಮಂಡಿಸಿದ **ಎ ಕ್ರಿಟಿಕಲ್ ಎನಾಲಿಸಿಸ್ ಆಫ್ ಆರ್ಟ ಎಜ್ಯುಕೇಷನ್ ಎಟ್ ಸ್ಕೂಲ ಲೆವಲ್ ಇನ್ ಕರ್ನಾಟಕ ಸ್ಟೇಟ್ ವಿತ್ ಸ್ಪೇಷಲ್ ರೆಫರನ್ಸ್ ಟು ಡ್ರಾಯಿಂಗ್ ಆಂಡ್ ಪೇಂಟಿಂಗ್**[೨೨] ೨೦೦೪ ರಲ್ಲಿ ಡಾ. ವಿ. ಎಂ. ಬಾಗಾಯತ್ ಅವರು **ಕರ್ನಾಟಕ ಮುಸ್ಲಿಂ ಅರಸರ ಕಾಲದ ಚಿತ್ರಕಲೆ : ಒಂದು ಅಧ್ಯಯನ**[೨೩] (೧೪೦೦-೧೮೦೦) ಕನ್ನಡ ವಿ.ವಿ.ಹಂಪಿಗೆ, ೨೦೦೪ ರಲ್ಲಿ ಡಾ.ಶಿವಕುಮಾರ ಎ.ಓ. ಅವರ **ಕರ್ನಾಟಕದ ಸಮಕಾಲೀನ ಉತ್ಸವಗಳು ಹಾಗೂ ವಾಣಿಜ್ಯ ಮೇಳಗಳ ವಿವಿಧ ಆಯಾಮಗಳು**[೨೪] ಗುಲಬರ್ಗಾ ವಿ.ವಿ.ಗೆ ೨೦೦೫ರಲ್ಲಿ ಡಾ.ಶಶಿಕಲಾ ಹೂಗಾರ ಅವರ **ಕರ್ನಾಟಕದ ತೊಗಲುಗೊಂಬೆ ಚಿತ್ರಕಲೆ**[೨೫] ಕನ್ನಡ ವಿ.ವಿ.ಹಂಪಿಗೆ ೨೦೦೫ ರಲ್ಲಿ ಡಾ.ಶಿವಪ್ರಕಾಶ ತುಕ್ಕಣ್ಣವರ್ ಅವರು **ಕರ್ನಾಟಕ ರಥ ಶಿಲ್ಪ ಕಲೆ**[೨೬] ಕನ್ನಡ ವಿ.ವಿ. ಹಂಪಿಗೆ ೨೦೦೫ ರಲ್ಲಿ ಡಾ.ಎಂ.ಎನ್.ಚಿತ್ರಗಾರ ಅವರ **ಕರ್ನಾಟಕ ಹಸ್ತಪ್ರತಿ ಚಿತ್ರಕಲೆ**[೨೭] ಕನ್ನಡ ವಿ.ವಿ. ಹಂಪಿಗೆ ೨೦೦೬ ರಲ್ಲಿ ಡಾ.ವಿಶ್ವೇಶ್ವರಿ ತಿವಾರಿ ಅವರ **ರಂಗೋಲಿ ಚಿತ್ರ ಕಲೆ ಸಾಂಸ್ಕೃತಿಕ ಅಧ್ಯಯನ**[೨೮] ಗುಲಬರ್ಗಾ ವಿ.ವಿ.ಗೆ

---

೧೯. ಡಾ.ಪ್ರಮೀಳಾ ಲೋಚನ: ಮೈಡ್ ಮ್ಯೂಜಿಕ್ ಅಂಡು ಕಲರ್ ಎಕ್ಸಪ್ಲೋಜಿಸ್ ಅಂಡ್ ಡೆವೆಲಪ್ಮೆಂಟ್ ಆಫ್ ರಾಗಮಾಲಾ ಅಂಡ್ ಕಾಂಟೆಂಪರರಿ ಪೇಂಟಿಂಗ್, ಪಿಎಚ್.ಡಿ.ಮ.ಪ್ರ., ಬೆಂಗಳೂರು ವಿ.ವಿ., ೨೦೦೨.

೨೦. ಡಾ.ವೀಣಾ ಶೇಖರ್: ಎ ಸ್ಟಡಿ ಆಫ್ ದಿ ಹಿಸ್ಟಾರಿಕಲ್ ಪೇಂಟಿಂಗ್ ಆಫ್ ಕರ್ನಾಟಕ (೧೭೮೦-೧೮೨೦) ಪಿಎಚ್.ಡಿ.ಮ.ಪ್ರ., ಬೆಂಗಳೂರು ವಿ.ವಿ., ೨೦೦೩.

೨೧. ಡಾ.ಸಿದ್ಧಲಿಂಗಸ್ವಾಮಿ ಹಿರೇಮಠ: ಕಲಾವಿದ ಆರ್.ಎಂ.ಹಡಪದ-ಒಂದು ಅಧ್ಯಯನ, ಪಿಎಚ್.ಡಿ.ಮ.ಪ್ರ., ಕನ್ನಡ ವಿ.ವಿ., ೨೦೦೩.

೨೨. ಡಾ.ಎಸ್.ಸಿ.ಪಾಟೀಲ: ಎ ಕ್ರಿಟಿಕಲ್ ಎನಾಲಿಸಿಸ್ ಆಫ್ ಆರ್ಟ ಎಜ್ಯುಕೇಶನ್ ಆಟ್ಸ್ ಸ್ಕೂಲ ಲೆವೆಲ್ ಇನ್ ಕರ್ನಾಟಕ ಸ್ಟೇಟ್ ವಿತ್ ಸ್ಪೇಷಲ್ ರೆಫೆರೆನ್ಸ್ ಟು ಡ್ರಾಯಿಂಗ ಅಂಡ್ ಪೇಂಟಿಂಗ, ಕರ್ನಾಟಕ ವಿ.ವಿ., ೨೦೦೩.

೨೩. ಡಾ.ವಿ.ಎಮ್.ಬಾಗಾಯತ್: ಕರ್ನಾಟಕ ಮುಸ್ಲಿಂ ಅರಸರ ಕಾಲದ ಚಿತ್ರಕಲೆ, ಒಂದು ಅಧ್ಯಯನ (೧೪೦೦-೧೮೦೦). ಪಿಎಚ್.ಡಿ.ಮ.ಪ್ರ., ಕನ್ನಡ ವಿ.ವಿ., ೨೦೦೪.

೨೪. ಡಾ.ಶಿವಕುಮಾರ ಎ.ಓ.: ಕರ್ನಾಟಕದ ಸಮಕಾಲೀನ ಉತ್ಸವಗಳು ಹಾಗೂ ವಾಣಿಜ್ಯ ಮೇಳಗಳ ವಿವಿಧ ಆಯಾಮಗಳು, ಪಿಎಚ್.ಡಿ.ಮ.ಪ್ರ., ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ, ೨೦೦೪.

೨೫. ಡಾ.ಶಶಿಕಲಾ ಹೂಗಾರ: ಕರ್ನಾಟಕ ತೊಗಲುಗೊಂಬೆ ಚಿತ್ರಕಲೆ, ಪಿಎಚ್.ಡಿ.ಮ.ಪ್ರ., ಕನ್ನಡ ವಿ.ವಿ., ೨೦೦೫

೨೬. ಡಾ.ಶಿವಪ್ರಕಾಶ ತುಕ್ಕಣ್ಣವರ: ಕರ್ನಾಟಕ ರಥ ಶಿಲ್ಪಕಲೆ, ಪಿಎಚ್.ಡಿ.ಮ.ಪ್ರ., ಕನ್ನಡ ವಿ.ವಿ., ೨೦೦೫.

೨೭. ಡಾ.ಎಚ್.ಎಸ್.ಚಿತ್ರಗಾರ: ಕರ್ನಾಟಕ ಹಸ್ತಪ್ರತಿ ಚಿತ್ರಕಲೆ, ಪಿಎಚ್.ಡಿ.ಮ.ಪ್ರ., ಕನ್ನಡ ವಿ.ವಿ., ೨೦೦೫.

೨೮. ವಿಶ್ವೇಶ್ವರಿ ತಿವಾರಿ: ರಂಗೋಲಿ ಚಿತ್ರಕಲೆ: ಸಂಸ್ಕೃತಿಕ ಅಧ್ಯಯನ, ಪಿಎಚ್.ಡಿ.ಮ.ಪ್ರ., ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ, ೨೦೦೬.

೨೦೦೭ರಲ್ಲಿ ಮಲ್ಲಿಕಾರ್ಜುನ ಬಾಗೋಡಿ ಅವರ **ಸುರಪೂರ ಶೈಲಿ ಚಿತ್ರಕಲೆ ಒಂದು ಅಧ್ಯಯನ**[೨೯] ಗುಲಬರ್ಗಾ ವಿ.ವಿ.ಗೆ ಇವೆಲ್ಲ ಪಿಎಚ್.ಡಿ. ಮಹಾಪ್ರಬಂಧಗಳು ಆಗಿವೆ. ೨೦೦೨ರಲ್ಲಿ ಡಾ.ಮೋಹನ್ ಕಳಸದ ಅವರ **ರಂಗಭೂಮಿ ಮತ್ತು ಕಲಾವಿದರು**[೩೦] ಡಿಲಿಟ್ ಮಹಾಪ್ರಬಂಧ ಕನ್ನಡ ವಿ.ವಿ. ಹಂಪಿಗೆ, ೨೦೦೫ ರಲ್ಲಿ ಡಾ.ಡಿ.ಎ.ಉಪಾಧ್ಯ ಅವರು **ದೃಶ್ಯ ಕಲೆಗಳು ಒಂದು ತೌಲನಿಕ ಅಧ್ಯಯನ**[೩೧] ಡಿಲಿಟ್ ಮಹಾಪ್ರಬಂಧ ಕನ್ನಡ ವಿ.ವಿ. ಹಂಪಿಗೆ ೨೦೦೫ ರಲ್ಲಿ ಡಾ. ಆನಂದ ಪೂಜಾರ ಅವರ **ಕರಾವಳಿ ಕರ್ನಾಟಕದ ಕಾವಿಚಿತ್ರಕಲೆ**[೩೨] ಡಿಲಿಟ್ ಮಹಾಪ್ರಬಂಧ ಕನ್ನಡ ವಿ.ವಿ.ಹಂಪಿಗೆ ಮಂಡಿಸಿದ್ದು ಇವೆಲ್ಲ ಡಿಲಿಟ್ ಮಹಾಪ್ರಬಂಧಗಳು ಆಗಿವೆ. ೨೦೦೨ ರಲ್ಲಿ ಶ್ರೀ ಮಲ್ಲಿಕಾರ್ಜುನ ಬಾಗೋಡಿಯವರು ಎಂ.ಫಿಲ್ ಪದವಿಗಾಗಿ ಮಂಡಿಸಿದ **ಚಿತ್ರಕಲಾವಿದ ಜೆ.ಎಸ್.ಖಂಡೇರಾವ್ ಒಂದು ಅಧ್ಯಯನ**[೩೩] ಕನ್ನಡ ವಿ.ವಿ.ಹಂಪಿಗೆ ೨೦೦೩ರಲ್ಲಿ ಶ್ರೀ ಎ.ಎಸ್.ವಿಶ್ವನಾಥ ಅವರ **ಯಕ್ಷಗಾನ ದೃಶ್ಯಕಲೆಯ ಮುಖವರ್ಣಿಕೆ ಮತ್ತು ವೇಶಭೂಷಣಗಳು**[೩೪] ಕನ್ನಡ ವಿ.ವಿ. ಹಂಪಿಗೆ ೨೦೦೫ರಲ್ಲಿ ಶ್ರೀ ಶಂಕರೆಪ್ಪ ಎಂ.ಕುಂದಗೋಳ ಅವರು **ಕಲಾವಿದ ಡಿ.ವ್ಹಿ.ಹಾಲಭಾವಿಯವರ ಬದುಕು ಮತ್ತು ಕಲಾಕೃತಿಗಳು**[೩೫] ಕನ್ನಡ ವಿ.ವಿ.ಹಂಪಿಗೆ ೨೦೦೫ರಲ್ಲಿ ಶ್ರೀ ಸಿ.ಡಿ.ಜೆಟ್ಟೆಣ್ಣವರ್ ಅವರು **ಕಲಾವಿದ ಡಾ.ಎಂ.ವ್ಹಿ. ಮಿಣಜಗಿಯವರ ಜೀವನ ಮತ್ತು ಕಲಾಕೃತಿಗಳು**[೩೬] ಕನ್ನಡ ವಿ.ವಿ. ಹಂಪಿಗೆ ಸಲ್ಲಿಸಿದ್ದು ೨೦೦೬ ರಲ್ಲಿ ಕುಮಾರಿ ಸುಚಿತ್ರಾ ಲಿಂಗದಳ್ಳಿ ಅವರು **ವಿಜಯನಗರ ಭಿತ್ತಿ ಚಿತ್ರಕಲೆ**[೩೭] ಕನ್ನಡ ವಿ.ವಿ.ಹಂಪಿಗೆ ೨೦೦೬ರಲ್ಲಿ ಶ್ರೀ ರವಿನಾಯ್ಕ್ ಅವರು **ಕಿನ್ನಾಳದ ಕಲೆ**[೩೮] ಕನ್ನಡ

---

೨೯. ಡಾ.ಮಲ್ಲಿಕಾರ್ಜುನ ಬಾಗೋಡಿ: ಸುರಪೂರ ಚಿತ್ರಕಲಾ ಶೈಲಿ, ಪಿಎಚ್.ಡಿ. ಮಹಾಪ್ರಬಂಧ, ಗುಲ್ಬರ್ಗಾ ವಿಶ್ವವಿದ್ಯಾಲಯ, ಗುಲ್ಬರ್ಗಾ, ೨೦೦೭.

೩೦. ಡಾ.ಮೋಹನ ಕಳಸದ: ರಂಗಭೂಮಿ ಮತ್ತು ಕಲಾವಿದರು, ಡಿ.ಲಿಟ್. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫.

೩೧. ಡಾ. ಡಿ.ಎ.ಉಪಾಧ್ಯ: ದೃಶ್ಯ ಕಲೆಗಳು ಒಂದು ತೌಲನಿಕ ಅಧ್ಯಯನ, ಡಿ.ಲಿಟ್. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫.

೩೨. ಡಾ. ಆನಂದ ಪೂಜಾರ: ಕರಾವಳಿ ಕರ್ನಾಟಕದ ಕಾವಿ ಚಿತ್ರಕಲೆ, ಡಿ.ಲಿಟ್. ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫.

೩೩. ಮಲ್ಲಿಕಾರ್ಜುನ ಬಾಗೋಡಿ: ಚಿತ್ರಕಲಾವಿದ ಜೆ.ಎಸ್.ಖಂಡೇರಾವ–ಒಂದು ಅಧ್ಯಯನ, ಎಂ.ಫಿಲ್. ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೨.

೩೪. ಎ.ಎಸ್.ವಿಶ್ವನಾಥ: ಯಕ್ಷಗಾನ ದೃಶ್ಯಕಲೆಯ ಮುಖವರ್ಣಿಕೆ ಮತ್ತು ವೇಷಭೂಷಣಗಳು, ಎಂ.ಫಿಲ್.ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೩.

೩೫. ಶಂಕರಪ್ಪ ಎಂ. ಕುಂದಗೋಳ: ಕಲಾವಿದ ಡಿ.ವಿ.ಹಾಲಭಾವಿಯವರ ಬದುಕು ಮತ್ತು ಕಲಾಕೃತಿಗಳು, ಎಂ.ಫಿಲ್. ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫.

೩೬. ಸಿ.ಡಿ.ಜಟ್ಟೆಣ್ಣವರ: ಕಲಾವಿದ ಡಾ.ಎಂ.ವಿ.ಮಿಣಜಗಿಯವರ ಜೀವನ ಮತ್ತು ಕಲಾಕೃತಿಗಳು ಎಂ.ಫಿಲ್. ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೫.

೩೭. ಸುಚಿತ್ರಾ ಲಿಂಗದಳ್ಳಿ: ವಿಜಯನಗರ ಭಿತ್ತಿ ಚಿತ್ರಕಲೆ, ಎಂ.ಫಿಲ್. ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬.

೩೮. ರವಿನಾಯ್ಕ್: ಕಿನ್ನಾಳದ ಕಲೆ, ಎಂ.ಫಿಲ್. ಪ್ರಬಂಧ, ಕನ್ನಡ ವಿಶ್ವವಿದ್ಯಾಲಯ, ಹಂಪಿ, ೨೦೦೬.

ವಿ.ವಿ.ಹಂಪಿಗೆ ಮಂಡಿಸಿದ್ದು-ಇವೆಲ್ಲ ಎಂ.ಫಿಲ್ ಪದವಿಗಾಗಿ ಮಂಡಿಸಿದ ಪ್ರಬಂಧಗಳಾಗಿವೆ. ಇವೆಲ್ಲ ಕರ್ನಾಟಕ ದೃಶ್ಯಕಲೆಯ ಕುರಿತಾಗಿ ಈವರೆಗೆಬಂದ ಸಂಶೋಧನಾ ಅಧ್ಯಯನಗಳಾಗಿವೆ.

ಈಗ ಗುಲಬರ್ಗಾ, ಬೆಂಗಳೂರು ಹಂಪಿಯ ಕನ್ನಡ ವಿಶ್ವವಿದ್ಯಾಲಯಗಳಲ್ಲಿ ಹಲವಾರು ವಿದ್ಯಾರ್ಥಿಗಳು ಸಂಶೋಧನಾ ಅಧ್ಯಯನದಲ್ಲಿ ನಿರತರಾಗಿರುವರು. ಇದಲ್ಲದೇ ಈ ವಿಶ್ವವಿದ್ಯಾಲಯಗಳೊಂದಿಗೆ ಧಾರವಾಡದ ಕರ್ನಾಟಕ ವಿಶ್ವವಿದ್ಯಾಲಯವೂ ಒಳಗೊಂಡಂತೆ ಅನೇಕ ಬಿ.ಎಫ್.ಎ.ಪದವಿ ಡಿಪ್ಲೋಮಾ ಪದವಿ ಹಾಗೂ ಎಂ.ವ್ಹಿ.ವಿ ಪದವಿ ಮತ್ತು ಎಂ.ಎಫ್.ಎ ಪದವಿ ತರಗತಿಗಳಲ್ಲಿ ಅಧ್ಯಯನ ಮಾಡುತ್ತಿರುವ ವಿದ್ಯಾರ್ಥಿಗಳು ಕಿರು ಸಂಶೋಧನಾ ಪ್ರಬಂಧಗಳನ್ನು ರಚಿಸುತ್ತಿದ್ದು, ಅವುಗಳ ಸಂಖ್ಯೆ ಮುನ್ನೂರಕ್ಕೂ ಹೆಚ್ಚಾಗಿದೆ. ಹೀಗೆ ಈ ಕ್ಷೇತ್ರದಲ್ಲಿ ಸಂಶೋಧನೆಗಳು ತೀವ್ರವಾಗಿ ಮುನ್ನಡೆಯುತ್ತಲಿದ್ದು, ಭವಿಷ್ಯತ್ತಿನಲ್ಲಿ ಕಲಾಕ್ಷೇತ್ರವು ಸಂಶೋಧನಾತ್ಮಕವಾಗಿಯೂ ಬಲಗೊಳ್ಳುವ ಆಶಯವನ್ನು ನಿರೀಕ್ಷಿಸಬಹುದಾಗಿದೆ.

**ನಿಪ್ಪಾಣಿವಾಡೆ ಭಿತ್ತಿಚಿತ್ರಕಲೆಯ ಕುರಿತು ಇಲ್ಲಿಯವರೆಗೆ ನಡೆದ ಅಧ್ಯಯನಗಳು:**

* ಡಾ.ಶಿವರಾಮ ಕಾರಂತರು[೩೯] **ಕರ್ನಾಟಕದ ಚಿತ್ರಕಲೆ** ಎಂಬ ಪುಸ್ತಕವನ್ನು ಕನ್ನಡ ಹಾಗೂ ಇಂಗ್ಲೀಷ ಎರಡೂ ಭಾಷೆಯಲ್ಲಿ ಪ್ರಕಟಗೊಳಿಸಿದ್ದು, ಇದರಲ್ಲಿ ಉತ್ತರ ಕರ್ನಾಟಕದ ೧೮-೧೯ನೇ ಶತಮಾನದ ಭಿತ್ತಿಚಿತ್ರಗಳು ಶೀರ್ಷಿಕೆಯ ಅಡಿಯಲ್ಲಿ ಅಥಣಿ, ನಿಪ್ಪಾಣಿ ಹಾಗೂ ನರಗುಂದದ ಭಿತ್ತಿಚಿತ್ರಗಳ ಬಗ್ಗೆ ಹೇಳಿದ್ದು, ಇದರಲ್ಲಿ ನಿಪ್ಪಾಣಿವಾಡೆದಲ್ಲಿಯ ಭಿತ್ತಿಚಿತ್ರಗಳ ಕುರಿತು ಚರ್ಚೆ ಮಾಡಿರುವರು.
* ೧೯೯೩ರಲ್ಲಿ ಪ್ರಕಟಗೊಂಡ ಕರ್ನಾಟಕದ ಜನಪದ ಚಿತ್ರಕಲೆ ಎಂಬ ಸಂಶೋಧನಾ ಗ್ರಂಥದಲ್ಲಿ ಡಾ.ಎಸ್.ಸಿ.ಪಾಟೀಲರು[೪೦] ನಿಪ್ಪಾಣಿವಾಡೆ ಭಿತ್ತಿಯಲ್ಲಿರುವ ವರ್ಣಚಿತ್ರಗಳನ್ನು ಹೆಸರಿಸುತ್ತ. ಈ ಭಿತ್ತಿಚಿತ್ರಗಳನ್ನು ಪ್ರೌಢಕಲಾವಿದರು ಜನಪದ ಶೈಲಿಯಲ್ಲಿ ರಚಿಸಿದಂತವುಗಳಾಗಿವೆ ಎಂದಿರುವರು.
* ಡಾ.ಯಾದಪ್ಪ ಪರದೇಶಿಯವರು[೪೧] ೨೦೦೨ರಲ್ಲಿ ತಮ್ಮ ಪಿಎಚ್.ಡಿ.ಮಹಾಪ್ರಬಂಧವಾದ **ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ** ಎಂಬ ಪ್ರಬಂಧದಲ್ಲಿ ನಿಪ್ಪಾಣಿ ರಾಜವಾಡೆಯಲ್ಲಿ ಒಳಕೋಣೆಯ ಚಿತ್ರಗಳು, ಹೊರಚಾವಡಿಯ ಚಿತ್ರಗಳೆಂದು ವರ್ಗೀಕರಿಸಿಕೊಂಡು ಕಲಾಕೃತಿಗಳ ಕುರಿತು ಅಧ್ಯಯನ ಮಾಡಿದ್ದಾರೆ. ಈ ಎಲ್ಲ ಪ್ರಯತ್ನಗಳನ್ನು ಗಮನಿಸಿ ಹೊಸ ವಿಷಯವನ್ನು ಸಂಗ್ರಹಿಸಿ ಪ್ರಬಂಧವನ್ನು ರೂಪಿಸಲಾಗಿದೆ.

---

೩೯. ಡಾ.ಶಿವರಾಮ ಕಾರಂತರು: "ಕರ್ನಾಟಕದ ಚಿತ್ರಕಲೆ",

೪೦. ಡಾ.ಎಸ್.ಸಿ.ಪಾಟೀಲ: "ಕರ್ನಾಟಕದ ಜನಪದ ಚಿತ್ರಕಲೆ", ಪಿಎಚ್.ಡಿ. ಮಹಾಪ್ರಬಂಧ, ೧೯೯೧.

೪೧. ಡಾ.ಯಾದಪ್ಪ ಪರದೇಶಿ: ಉತ್ತರಕರ್ನಾಟಕದ ಭಿತ್ತಿಚಿತ್ರಕಲೆ, ಪಿಎಚ್.ಡಿ.ಮಹಾಪ್ರಬಂಧ, ಕನ್ನಡ ವಿಶ್ವವಿದ್ಯಾಲಯ ಹಂಪಿ, ೨೦೦೧.

* ಶ್ರೀ ಪಿ.ಆರ್.ತಿಪ್ಪೇಸ್ವಾಮಿ ಅವರು[೪೨] **ಕಲಾವಿದನ ನೆನಪುಗಳು** ಎಂಬ ಪುಸ್ತಕದಲ್ಲಿ ನಿಪ್ಪಾಣಿವಾಡೆ ರಚನೆಯ ಕುರಿತು ವರ್ಣಿಸುತ್ತಾ ವಾಡೆಯ ವಂಶಸ್ಥರ ಕುರಿತು ಹೇಳುತ್ತ ತಾವು ಕರ್ನಾಟಕ ಲಲಿತಕಲಾ ಅಕಾಡೆಮಿಯ ಅಧ್ಯಕ್ಷರಾಗಿದ್ದಾಗ ೨೧/೨/೧೯೯೩ರಲ್ಲಿ ಈ ವಾಡೆ ಭಿತ್ತಿಚಿತ್ರಗಳನ್ನು ವಿಡಿಯೋ ಮಾಡಿಕೊಂಡಿರುವುದಾಗಿಯೂ ತಿಳಿಸಿರುವರು. (ಆದರೆ ಈಗ ಈ ವಿಡಿಯೋ ಚಿತ್ರಗಳು ಸರಿಯಾಗಿ ಉಳಿದುಕೊಂಡಿಲ್ಲವೆಂದೂ ತಿಳಿದು ಬಂದಿತು)
* ಪ್ರೊ.ಬಿ.ಶೇಕ್ ಅಲಿ ಅವರು[೪೩] **ಕರ್ನಾಟಕ ಚರಿತ್ರೆ** ಗ್ರಂಥದ ೧೩ನೇ ಅಧ್ಯಾಯದಲ್ಲಿ ಸಾಂಸ್ಕೃತಿಕ ದೃಶ್ಯದ ಕುರಿತು ಹೇಳಿದ್ದು, ೧೮-೧೯ನೇ ಶತಮಾನದಲ್ಲಿ ಉತ್ತರ ಕರ್ನಾಟಕದ ಭಿತ್ತಿಚಿತ್ರಗಳ ಬಗ್ಗೆ ಹೇಳುತ್ತ, ನಿಪ್ಪಾಣಿ ವಾಡೆಯ ಭಿತ್ತಿಚಿತ್ರಗಳು ಇರುವುದಾಗಿ ಹಾಗೂ ಅರಮನೆಯ ಶಯ್ಯಾಗಾರದಲ್ಲಿ ಕೃಷ್ಣ ಮತ್ತು ಅವನ ಪತ್ನಿಯ ಚಿತ್ರಗಳು ಸುಂದರವಾಗಿವೆ ಎಂದು ಹೇಳಲಾಗಿದೆ. ಅಲ್ಲದೆ ಕರ್ಮವೀರ, ಸುಧಾ, ವಾರಪತ್ರಿಕೆಗಳಲ್ಲಿ ಪರಿಚಯಾತ್ಮಕ ಲೇಖನಗಳು ಬಂದಿವೆ.

**ಅಧ್ಯಯನದ ವ್ಯಾಪ್ತಿ:**

ಸಾಂಸ್ಕೃತಿಕ ಕರ್ನಾಟಕ ಈಗಿನ ರಾಜಕೀಯ ಕರ್ನಾಟಕದ ಪ್ರದೇಶಕ್ಕಿಂತ ಹಿರಿದಾದುದು. ಚಾಲುಕ್ಯರು ರಾಷ್ಟ್ರಕೂಟರ ಅವಧಿಯಲ್ಲಿ ಉತ್ತರಕ್ಕೆ ಗುಜರಾಥದವರೆಗೂ ಆಕ್ರಮಿಸಿಕೊಂಡಿದ್ದರೆ ವಿಜಯನಗರ ಸಾಮ್ರಾಜ್ಯವು ಪಶ್ಚಿಮಕ್ಕೆ ಓರಿಸ್ಸಾದವರೆಗೂ, ದಕ್ಷಿಣದಲ್ಲಿ ಕನ್ಯಾಕುಮಾರಿಯವರೆಗೂ ಅಂದರೆ ದಕ್ಷಿಣ ಭಾರತವನ್ನೆಲ್ಲಾ ಆಕ್ರಮಿಸಿಕೊಂಡಿರುವ ವಿಜಯನಗರ ಸಾಮ್ರಾಜ್ಯ ರೂಪುಗೊಂಡಿತ್ತು. ನಂತರ ಬಂದ ಸುಲ್ತಾನರು ದಖ್ಖನ್‌ದ ಉತ್ತರಭಾಗವನ್ನು ತಮ್ಮ ಅಧೀನಕ್ಕೆ ತೆಗೆದುಕೊಂಡು ವಿಜಯನಗರ ಅರಸರನ್ನು ಸೋಲಿಸಿ ಇಡೀ ದಖ್ಖನ್ ಪ್ರದೇಶವನ್ನೆಲ್ಲಾ ತಮ್ಮ ಅಧೀನಕ್ಕೆ ತೆಗೆದುಕೊಳ್ಳುವುದರ ಮೂಲಕ ದಖ್ಖನ್‌ಶೈಲಿಯು ವಿಜಯನಗರ ಕಲಾಶೈಲಿಯೊಂದಿಗೆ ಮಿಶ್ರಣವಾಗಿ ಇಡೀ ಕರ್ನಾಟಕದ ತುಂಬ ಅವರಿಸಿದ್ದುದು ಕಂಡುಬರುತ್ತದೆ. ಅಂತೆಯೇ ಉತ್ತರ ಕರ್ನಾಟಕದಲ್ಲಿಯ ನಿಪ್ಪಾಣಿ ಸಂಸ್ಥಾನ ಆದಿಲ್‌ಶಾಹಿ ಸುಲ್ತಾನನು ಒಬ್ಬ ಸರದಾರನಿಗೆ ಕೊಟ್ಟಿದ್ದ ಜಹಗೀರಿಯಲ್ಲಿ ಈ ಪುರಾತನ ವಾಡೆಯನ್ನು ನಿರ್ಮಿಸಿದ್ದು, ಈ ವಾಡೆಯಲ್ಲಿನ ಭಿತ್ತಿಚಿತ್ರಗಳನ್ನು ಮಾತ್ರ ಅಧ್ಯಯನಕ್ಕೆ ಸೀಮಿತಗೊಳಿಸಿಕೊಂಡು ಅಧ್ಯಯನ ಮಾಡಲಾಗಿದೆ.

---

೪೨. ಶ್ರೀ.ಪಿ.ಆರ್.ತಿಪ್ಪೇಸ್ವಾಮಿ: ಕಲಾವಿದನ ನೆನಪುಗಳು
೪೩. ಪ್ರೊ. ಬಿ. ಶೇಕ್ ಅಲಿ : "ಕರ್ನಾಟಕ ಚರಿತ್ರೆ", ಪು.೨೭೧.

**ಅಧ್ಯಯನದ ಸ್ವರೂಪ**

ಈ ಕಿರುಸಂಶೋಧನಾ ಪ್ರಬಂಧವನ್ನು ಅಧ್ಯಯನದ ಅನುಕೂಲಕ್ಕಾಗಿ ಎಂಟು ಅಧ್ಯಾಯಗಳಾಗಿ ವಿಂಗಡಿಸಿಕೊಂಡು ಪ್ರತಿಯೊಂದು ಅಧ್ಯಾಯದಲ್ಲಿ ಚರ್ಚಿಸುವ ವಿಷಯವನ್ನು ಕುರಿತಂತೆ ಅದರ ಸಂಕ್ಷಿಪ್ತ ಸ್ವರೂಪದ ವಿವರವನ್ನು ಇಲ್ಲಿ ನೀಡಲಾಗಿದೆ.

**ಒಂದನೆಯ ಅಧ್ಯಾಯ** : ಅಧ್ಯಯನದ ಉದ್ದೇಶ, ವ್ಯಾಪ್ತಿ, ಸ್ವರೂಪ, ವಿಧಾನಗಳ ಕುರಿತು ವಿವರಣೆ ನೀಡಲಾಗುವುದು.

**ಎರಡನೆಯ ಅಧ್ಯಾಯ** : ನಿಪ್ಪಾಣಿ ಸಂಸ್ಥಾನ ಮತ್ತು ಅದರ ಸಾಂಸ್ಕೃತಿಕ ಪರಿಸರದ ಕುರಿತಾಗಿದ್ದು, ನಿಪ್ಪಾಣಿ ಸಂಸ್ಥಾನದ ಹುಟ್ಟು, ಬೆಳವಣಿಗೆ ಪ್ರಮುಖ ನಾಯಕರ ಪಾತ್ರ ವೈಭವದಿಂದ ಕೂಡಿದ ಆಡಳಿತ ವ್ಯವಸ್ಥೆ ಸಾಂಸ್ಕೃತಿಕ ಪರಿಸರಕ್ಕೆ ಅವರು ಕೊಟ್ಟಂತಹ ಅಮೂಲ್ಯ ಕೊಡುಗೆಗಳನ್ನು ಅವರ ಧಾರ್ಮಿಕತೆ, ಸಾಮಾಜಿಕತೆ, ಆರ್ಥಿಕತೆಯ ಕುರಿತಾದ ವಿವರಣೆ ಮಾಡಲಾಗುವುದು.

**ಮೂರನೆಯ ಅಧ್ಯಾಯ** : ಭಿತ್ತಿ ಚಿತ್ರಕಲೆಯ ಭಿತ್ತಿ ಸಿದ್ಧತೆ ಮತ್ತು ಭಿತ್ತಿಚಿತ್ರಕಲೆಯ ರಚನಾ ವಿಧಿ ವಿಧಾನಗಳ ಕುರಿತಾಗಿದ್ದು ಭಿತ್ತಿ ಚಿತ್ರಕಲೆಯ ತಾಂತ್ರಿಕಲೆ ಮತ್ತು ವಿವಿಧ ವಸ್ತುಗಳನ್ನು ಉಪಯೋಗಿಸಿ ಬಿತ್ತಿಯನ್ನು ನಿರ್ಮಿಸಲಾಗುವ ಬಗೆಯ ಕುರಿತು ಹೇಳಲಾಗುವುದು ಅಲ್ಲದೇ ಭಿತ್ತಿ ಚಿತ್ರಗಳಲ್ಲಿ ಬಳಸುವ ಬಣ್ಣಗಳ ವೈವಿಧ್ಯತೆ ಹಾಗೂ ವಿಶಿಷ್ಠ ರೀತಿಯ ಕುಂಚದ ಬಳಕೆ ಮತ್ತು ಖನಿಜ ಮೂಲ ಹಾಗೂ ಸಸ್ಯಮೂಲಗಳಿಂದ ತಯಾರಾದ ಬಣ್ಣಗಳ ಕುರಿತು ವಿಶೇಷವಾಗಿ ಅಧ್ಯಯನ ಮಾಡಲಾಗುವುದು.

**ನಾಲ್ಕನೆಯ ಅಧ್ಯಾಯ** : ನಿಪ್ಪಾಣಿವಾಡೆ ಭಿತ್ತಿಚಿತ್ರಕಲೆಯ ವಸ್ತು ವಿಷಯ ಮತ್ತು ವೈವೀಧ್ಯತೆತಯ ಕುರಿತಾಗಿದ್ದು, ಪ್ರಸ್ತುತ ಈ ಕಿರುಪ್ರಬಂಧದಲ್ಲಿ ಈ ಅಧ್ಯಾಯವು ಪ್ರಮುಖವಾಗಿದ್ದು, ಸವಿಸ್ತಾರವಾಗಿ ಚರ್ಚಿಸಲಾಗುವುದು. ನಿಪ್ಪಾಣಿ ವಾಡೆ ಭಿತ್ತಿಚಿತ್ರಗಳು ಈ ನಾಡಿನ ಸಾಂಸ್ಕೃತಿಕ ಶ್ರೀಮಂತಿಕೆ ಹೆಚ್ಚಿಸುವಲ್ಲಿ ಧಾರ್ಮಿಕ ಉನ್ನತಿಯ ಹಿನ್ನೆಲೆಯಲ್ಲಿ ಮಹತ್ವಪೂರ್ಣವಾದ ಪಾತ್ರವಹಿಸಿದ್ದು, ಸಾಂಸ್ಕೃತಿಕತೆಯನ್ನು ಈ ಕಲೆಯಲ್ಲಿ ಹೇಗೆ ಅಭಿವ್ಯಕ್ತಿಗೊಳಿಸಿದ್ದಾರೆ ಎಂಬುದನ್ನು ಈ ಅಧ್ಯಯನದಿಂದ ಕಂಡುಕೊಳ್ಳಲಾಗುವುದು. ನಿಪ್ಪಾಣಿ ಸಂಸ್ಥಾಪಕರು ಧರ್ಮಪ್ರಸಾರದ ಸಾಧನವಾಗಿ, ಮನರಂಜನೆಗಾಗಿ ಭಾವನೆಗಳನ್ನು ಕಲಾತ್ಮಕವಾಗಿ ಅಭಿವ್ಯಕ್ತಿಗೊಳಿಸುವಲ್ಲಿ ಹೇಗೆ ಬಳಸಿಕೊಂಡರು ಎಂಬುದನ್ನು ಚರ್ಚಿಸಲಾಗುವುದು ಮತ್ತು ಭಿತ್ತಿಚಿತ್ರಗಳಲ್ಲಿನ ಜನಪದ ಮತ್ತು ಶಿಷ್ಟಪದ ಅಂಶಗಳನ್ನು ಗುರುತಿಸುವಿಕೆ ಅಲ್ಲದೇ ಪ್ರಮುಖವಾಗಿ ಇಲ್ಲಿಯ ಭಿತ್ತಿಚಿತ್ರಗಳನ್ನು ಎರಡು ಭಾಗಗಳನ್ನಾಗಿ ಮಾಡಿಕೊಂಡು ಅಧ್ಯಯನ ಮಾಡಲಾಗುವುದು. ೧. ದರ್ಬಾರ್ ಹಾಲ್ ೨. ಪಹರಾಹಾಲ್‌ದಲ್ಲಿಯ ಭಿತ್ತಿಚಿತ್ರಗಳು ಎಂದು ವರ್ಗೀಕರಣ ಮಾಡಿಕೊಂಡು ಪೌರಾಣಿಕ ಭಾಗವತ, ಗೀತಗೋವಿಂದದಂತಹ ಕಥೆಗಳ ಸನ್ನಿವೇಶಗಳು ಹೇಗೆ ಮೈದಾಳಿವೆ ಎಂಬ ಅಂಶಗಳ ಕುರಿತು ವಿಸ್ತಾರವಾಗಿ ಅಧ್ಯಯನ ಮಾಡಲಾಗುವುದು.

**ಐದನೆಯ ಅಧ್ಯಾಯ :** ನಿಪ್ಪಾಣಿವಾಡೆ ಭಿತ್ತಿಚಿತ್ರಗಳ ಕಲಾವಿನ್ಯಾಸ ಮತ್ತು ಪ್ರಮುಖ ಲಕ್ಷಣಗಳ ಕುರಿತು ಚರ್ಚಿಸಲಾಗುವುದು. ಈ ಭಿತ್ತಿ ಚಿತ್ರಗಳನ್ನು ಮೂರು ರೀತಿಯಲ್ಲಿ ವರ್ಗೀಕರಿಸಿಕೊಂಡು ಕಲಾವಿನ್ಯಾಸವನ್ನು ಮಾಡಿಕೊಳ್ಳಲಾಗಿದೆ. ೧. ಶೈವ ಸಂಪ್ರದಾಯದ ಭಿತ್ತಿಚಿತ್ರಗಳು ೨.ವೈಷ್ಣವ ಸಂಪ್ರದಾಯದ ಭಿತ್ತಿಚಿತ್ರಗಳು ೩. ಸಂಕಿರಣ ರೀತಿಯ ಭಿತ್ತಿಚಿತ್ರಗಳು ಎಂದು ಗುರುತಿಸಿಕೊಂಡು ಭಿತ್ತಿಚಿತ್ರಗಳಲ್ಲಿಯ ರಚನಾ ವಿಧಾನ, ಶೈಲಿ, ತಂತ್ರ, ಚಿತ್ರಕೌಶಲ್ಯವನ್ನು ಕುರಿತು ಚರ್ಚಿಸಲಾಗುವುದು. ಅಲ್ಲದೇ ಚಿತ್ರಗಳ ಮೇಲೆ ಬೀರಿದ ಪ್ರಭಾವವನ್ನೂ ಸಹ ಸ್ಥೂಲವಾಗಿ ಕಟ್ಟಿಕೊಡಲಾಗುವುದು.

**ಆರನೆಯ ಅಧ್ಯಾಯ :** ನಿಪ್ಪಾಣಿವಾಡೆ ಕಾಲದ ಸಮಕಾಲೀನ ಭಿತ್ತಿಚಿತ್ರಗಳ ಪ್ರಭಾವ, ಪ್ರೇರಣೆ, ತಂತ್ರಗಳ ಕುರಿತು ಚರ್ಚಿಸಲಾಗುವುದು ಇದೇ ಅವಧಿಯಲ್ಲಿ ರಚನೆಯಾದ ಮಹಾಲಿಂಗಪುರ ಬಿ.ಕೆ.ಹಳ್ಳಿ, ಅಮ್ಮಿನಭಾವಿ, ನರಗುಂದ, ಸವಣೂರುಗಳ (ದೇವಾಲಯ, ಮಠ, ಅರಮನೆ, ವಾಡೆಗಳ) ಭಿತ್ತಿಯಲ್ಲಿ ವರ್ಣಚಿತ್ರಗಳು ರಚನೆಗೊಂಡಿದ್ದು, ಅವುಗಳಲ್ಲಿಯ ವಸ್ತು, ವಿಷಯ, ರಚನಾ ತಂತ್ರ, ವಿಧಾನಗಳ ಕುರಿತು ಸ್ಥೂಲವಾಗಿ ಚರ್ಚಿಸಲಾಗುವುದು.

**ಏಳನೆಯ ಅಧ್ಯಾಯ :** ನಿಪ್ಪಾಣಿವಾಡೆ ಭಿತ್ತಿಚಿತ್ರಕಲೆಯ ಆಪತ್ತುಗಳು ಮತ್ತು ಸಂರಕ್ಷಣಾ ಕ್ರಮಗಳ ಕುರಿತು ಹೇಳಲಾಗುವುದು ಕರ್ನಾಟಕದಲ್ಲಿಯ ಪ್ರಾಚೀನ ಭಿತ್ತಿ ಚಿತ್ರಗಳು ಅನೇಕ ಆಪತ್ತುಗಳಿಗೀಡಾಗಿ ನಾಶವಾಗುತ್ತಲಿವೆ. ಇದಕ್ಕೆ ನಿಪ್ಪಾಣಿವಾಡೆ ಭಿತ್ತಿಚಿತ್ರಗಳು ಹೊರತಾಗಿಲ್ಲ. ಇಲ್ಲಿ ಖಾಸಗಿ ಕೋಣೆಯ ಚಿತ್ರಗಳು ಸ್ವಲ್ಪಮಟ್ಟಿಗೆ ಉತ್ತಮವಾಗಿ ಉಳಿದಿರುವುದು ಕಂಡು ಬರುತ್ತಿದೆ. ಆದರೆ ಸಭಾಂಗಣದಲ್ಲಿಯ ಚಿತ್ರಗಳು ಮುಸುಕು ಮುಸುಕಾಗಿ ಅಲ್ಲಲ್ಲಿ ಕೆದರಿರುವುದು ಕಲಾಕೃತಿಗಳ ಮೇಲೆ ಡಿಸ್ಟಂಪರ್ ಬಡದಿರುವುದು ಕಂಡುಬರುತ್ತವೆ. ಕಾಲಮಾನದ ಪ್ರಭಾವದಿಂದ ಮತ್ತು ವಿವಿಧ ಬಗೆಯ ಆಪತ್ತುಗಳಿಂದ ಅವನತಿಯತ್ತ ಸಾಗುತ್ತಿರುವ ಇಂತಹ ಚಿತ್ರಗಳನ್ನು ಒಂದು ಅಧ್ಯಯನಕ್ಕೊಳಪಡಿಸಿ ಇವುಗಳ ಮಹತ್ವವನ್ನು ಮನವರಿಕೆ ಮಾಡಿಕೊಡುವುದು ಪ್ರಮುಖವಾದ ಸಂಗತಿಯಾಗಿದೆ. ಅಲ್ಲದೇ ವಿನಾಶದ ಕಡೆಗೆ ಸಾಗುತ್ತಿರುವ ಇಲ್ಲಿನ ಚಿತ್ರಗಳನ್ನು ಸ್ವಾಭಾವಿಕ ಆಪತ್ತು ಮತ್ತು ವ್ಯಕ್ತಿಗತ ಆಪತ್ತು ಎಂದು ವರ್ಗೀಕರಿಸಿಕೊಂಡು ಅಭ್ಯಸಿಸಲಾಗುವುದು ಅಲ್ಲದೇ ಸಂರಕ್ಷಣಾ ಕ್ರಮಗಳಾದ ಆಧುನಿಕ ವಿಧಿ-ವಿಧಾನಗಳ ಬಗ್ಗೆ ಸ್ಥೂಲವಾಗಿ ಅಧ್ಯಯನ ಮಾಡಲಾಗುವುದು.

**ಎಂಟನೆಯ ಅಧ್ಯಾಯ :** ಈ ಅಧ್ಯಾಯವು ಸಮಾರೋಪವಾಗಿದ್ದು, ಈ ಅಧ್ಯಾಯದಲ್ಲಿ ಈ ಹಿಂದಿನ ಏಳೂ ಅಧ್ಯಾಯಗಳ ಸಮೀಕ್ಷೆಯನ್ನು ಮಾಡುತ್ತ ಒಟ್ಟು ಅಧ್ಯಯನದ ಫಲಿತಗಳನ್ನು ಇಲ್ಲಿ ಸಮೀಕ್ಷಿಸಲಾಗುವುದು.

**ಅಧ್ಯಯನದ ವೈಧಾನಿಕತೆ**

ಈ ಅಧ್ಯಯನಕ್ಕೆ ಎರಡು ರೀತಿಯ ಆಕರ ಸಾಮಗ್ರಿಗಳನ್ನು ಬಳಸಿಕೊಳ್ಳಬಹುದಾಗಿದೆ.

೧. ಮೂಲ ಆಕರ ಸಾಮಗ್ರಿಗಳು

೨. ಆನುಷಂಗಿಕ ಆಕರ ಸಾಮಗ್ರಿಗಳು

**ಮೂಲ ಆಕರ ಸಾಮಗ್ರಿಗಳು :**

ಮೂಲ ಆಕರ ಸಾಮಗ್ರಿಗಳಲ್ಲಿ ಕ್ಷೇತ್ರಕಾರ್ಯ ಅತಿ ಮುಖ್ಯವಾದ ಅಂಶವಾಗಿದ್ದು, ಅಧ್ಯಯನ ಕ್ರಮಕ್ಕೆ ಅಗತ್ಯವಾಗಿ ಬೇಕಾಗುವಂತಹ ವಿಧಾನ ಇದಾಗಿದ್ದು, ಒಂದು ನಾಡಿನ ಸಂಸ್ಕೃತಿ, ಇತಿಹಾಸ, ಕಲೆ ವಿಷಯಗಳ ಬಗ್ಗೆ ಸಂಶೋಧನೆ ಮಾಡುವಾಗ ಕ್ಷೇತ್ರಕಾರ್ಯ ಮುಖ್ಯವಾಗುತ್ತದೆ. ಇದು ಮೂಲ ಆಕರ ಸಾಮಗ್ರಿಗಳಿಂದ ಮಾಹಿತಿ ಸಂಗ್ರಹಿಸಲು ಸುಲಭಮಾರ್ಗವಾಗಿದೆ. ಈ ಅಧ್ಯಯನಕ್ಕೆ ಮೂಲ ಆಕರ ಸಾಮಗ್ರಿಯಾಗಿ ಮೂಲ ಭಿತ್ತಿಚಿತ್ರಗಳನ್ನು ಅಧ್ಯಯನಕ್ಕೆ ಬಳಸಿಕೊಳ್ಳಲಾಗಿದೆ.

ಕ್ಷೇತ್ರಕಾರ್ಯದಲ್ಲಿ ಅವಲೋಕನ ಅತಿ ಮುಖ್ಯವಾದ ಅಂಶವಾಗಿದ್ದು, ಮೂಲಭಿತ್ತಿಚಿತ್ರಗಳು ಇರುವ ಕಡೆಗೆ ಅನೇಕ ಭಾರಿ ಭೇಟಿಕೊಟ್ಟು, ಚಿತ್ರಗಳನ್ನು ಸೂಕ್ಷ್ಮವಾಗಿ ಗಮನಿಸಿ ಛಾಯಾಚಿತ್ರಣ ಮಾಡಿಕೊಂಡು ಅದಕ್ಕೆ ಸಂಬಂಧಿಸಿದ ಮಾಹಿತಿಯನ್ನು ಅದೇ ಸ್ಥಳದಲ್ಲಿ ಸಂಗ್ರಹಿಸಿಕೊಂಡು ಅಲ್ಲದೇ ಭಿತ್ತಿಚಿತ್ರಗಳಿದ್ದ ನಿಪ್ಪಾಣಿ ವಾಡೆ ವಾರಸುದಾರರನ್ನು ಹಾಗೂ ಸ್ಥಳೀಯ ಹಿರಿಯರನ್ನು ಮಾಹಿತಿ ಕೇಳಿ ಪಡೆದುಕೊಳ್ಳುವುದು. ಮೂಲಚಿತ್ರಗಳು ಲಭ್ಯವಿಲ್ಲದ ಸಮಯದಲ್ಲಿ ಅವುಗಳನ್ನು ಪ್ರತಿಮಾಡಿಸಿಟ್ಟುಕೊಂಡು ಅಥವಾ ಛಾಯಾಚಿತ್ರ ಮಾಡಿಕೊಳ್ಳುವುದು ಮತ್ತು ಈ ಕ್ಷೇತ್ರಕಾರ್ಯದಲ್ಲಿ ಹಲವಾರು ವಿದ್ವಾಂಸರ ಜೊತೆಗೆ, ವಿಷಯಕ್ಕೆ ಸಂಬಂಧಿಸಿದಂತೆ ಚರ್ಚಿಸಿ ಮಾಹಿತಿಯನ್ನು ಸಂಗ್ರಹಿಸಲಾಗಿದೆ. ಹೀಗೆ ಕ್ಷೇತ್ರಕಾರ್ಯದಿಂದ ದೊರೆತ ವಿವರಗಳನ್ನು ಅಭ್ಯಾಸಕ್ಕೆ ಮತ್ತು ಬರವಣಿಗೆಗೆ ಅನುಕೂಲವಾಗುವಂತೆ ಪಟ್ಟಿಕೆಗಳಲ್ಲಿ ಸಂಗ್ರಹ ಮಾಡಿಕೊಂಡು ಪ್ರಸ್ತುತ ಪ್ರಬಂಧವನ್ನು ರಚಿಸಲಾಗುವುದು.

**ಆನುಷಂಗಿಕ ಆಕರ ಸಾಮಗ್ರಿಗಳು:**

ಪ್ರಬಂಧ ರಚಿಸುವಲ್ಲಿ ಎರಡನೇ ವಿಧಾನ ಅನುಷಂಗಿಕ ಆಕರ ಸಾಮಗ್ರಿಯಾಗಿದ್ದು, ಇದಕ್ಕೆ ಪ್ರಕಟಿತ, ಅಪ್ರಕಟಿತ ಸಾಹಿತ್ಯ ಕೃತಿಗಳು, ಸಂಪುಟಗಳು, ಅಭಿನಂದನಾಗ್ರಂಥಗಳು, ವಿಶ್ವಕೋಶಗಳು ಅನುವಾದ ಗ್ರಂಥಗಳು, ಸಂಶೋಧನಾ ಮಹಾಪ್ರಬಂಧಗಳು ದೇಶಿ, ವಿದೇಶಿ ಪ್ರವಾಸಿಗರ ಬರಹಗಳು, ಸಂಶೋಧನಾ ಲೇಖನಗಳು, ಪತ್ರಗಳು, ಮೂಲಭಿತ್ತಿ ಚಿತ್ರಗಳ ಪ್ರತಿಕೃತಿಗಳನ್ನು ಸಂಗ್ರಹಿಸಿಕೊಂಡು ಅಧ್ಯಯನ ಮಾಡಲಾಗುವುದು.

ಹೀಗೆ ಆನುಷಂಗಿಕ ಆಕರ ಸಾಮಗ್ರಿಗಳನ್ನು ವಿವಿಧ ಪಟ್ಟಿಕೆಗಳಲ್ಲಿ ಸಂಗ್ರಹ ಮಾಡಿಕೊಂಡು, ಪ್ರಸ್ತುತ ಕಿರುಪ್ರಬಂಧವನ್ನು ಸಿದ್ಧಪಡಿಸಲಾಗುವುದು.

v v v

ಅಧ್ಯಾಯ : ಎರಡು

# ನಿಪ್ಪಾಣಿಸಂಸ್ಥಾನ ಮತ್ತು ಸಾಂಸ್ಕೃತಿಕ ಪರಿಸರ

## ನಿಂಬಾಳಕ್ ಮನೆತನದ ಪೂರ್ವ ಇತಿಹಾಸ

ಪ್ರಸಿದ್ಧ ಉಜ್ಜಯನಿ ವಿಕ್ರಮಾದಿತ್ಯ ಕ್ಷತ್ರಿಯ ಮನೆತನದಿಂದ ಬಂದಿರುವ ಪರಮಾರ (ಪವಾರ)ರು. ಮೂಲತಃ ಲಿಂಗಾಯತರಾಗಿದ್ದು ಮುಂದೆ ಮರಾಠಾ ಧಾರ್ಮಿಕರಾದರು. ಇವರ ಮನೆತನದಿಂದ ಇಬ್ಬರು ಪರಾಕ್ರಮಿಗಳು ದಕ್ಷಿಣ ಭಾರತದ ಕಡೆ ಬಂದು "ಧಾರ" ಮತ್ತು "ದೇವದಾಸ" ಎಂಬ ಎರಡು ಬೇರೆ ಬೇರೆ ಸಂಸ್ಥಾನಗಳನ್ನು ಸ್ಥಾಪಿಸಿದರು. ಮುಂಬೈ ಕರ್ನಾಟಕ ಪ್ರಾಂಥದ ಉತ್ತರಭಾಗದಲ್ಲಿ ಹಾಗೂ 'ದಕ್ಷಿಣಭಾಗದಲ್ಲಿ ಎರಡು ಪ್ರಮುಖ ಜಹಾಗೀರದಾರ್ ಸಂಸ್ಥಾನಗಳನ್ನು ನಿರ್ಮಾಣಮಾಡಿದ್ದು ಉತ್ತರ ಭಾಗದಲ್ಲಿ ಹೊಳಕರ್, ಗಾಯಕವಾಡ, ಪವಾರ (ಪರಮಾರ) ಸಿಂಥೆ ಮುಂತಾದ ಸರ್ಧಾರ್‌ಗಳು ತಮ್ಮ ಶೌರ್ಯದಿಂದ ಮತ್ತು ಸ್ವಸಾಮರ್ಥ್ಯದ ಮೂಲಕ ಗೆದ್ದುಕೊಂಡಿರುವ ಜಾಹಗೀರ್‌ದಾರ್ ಸಂಸ್ಥಾನಗಳನ್ನು ನಿರ್ಮಾಣ ಮಾಡಿದರೆ, ಮುಂಬೈ ಕರ್ನಾಟಕದ ದಕ್ಷಿಣಭಾಗದಲ್ಲಿ (ಪರಮಾರ) ಪವಾರ, ಗೋರ್ಪಡೆ, ದೇಸಾಯಿ ಮುಂತಾದ ಸರ್ಧಾರ್‌ಗಳು ತಮ್ಮ ಶೌರ್ಯದಿಂದ ಹಾಗೂ ಸ್ವಸಾಮರ್ಥ್ಯದಿಂದ ಗೆದ್ದುಕೊಂಡಿರುವ ಜಹಾಗೀರದಾರ್ ಸಂಸ್ಥಾನಗಳನ್ನು ನಿರ್ಮಾಣ ಮಾಡಿಕೊಂಡಿದ್ದರು.[೧]

ಕೆಲವು ವರ್ಷಗಳ ನಂತರ ಮಹಾರಾಷ್ಟ್ರದಲ್ಲಿನ ಫಲ್ಟನ್ (ಸಾತಾರಾ) ಹಾಗೂ ನಿಂಬಸ್ (ನಿಂಬಾಳಕರ್) ಎಂಬಲ್ಲಿ ಇವರು ತಮ್ಮದೇ ಆದ ರಾಜ್ಯ ಸ್ಥಾಪನೆ ಮಾಡಿದರು. ಈ ಕಾರಣದಿಂದಲೇ ಇವರ ಮನೆತನಕ್ಕೆ "ನಿಂಬಾಳಕರ್" ಎಂದು ಹೆಸರು ಬಂದಿತು. ನಿಂಬಸ್ (ನಿಂಬಾಳಕರ್) ಮತ್ತು ಪಲ್ಟನ್ (ಸಾತಾರಾ) ಮಹಾರಾಜರು ಇದೇ ಸಮಯದಲ್ಲಿ ಅತ್ಯಂತ ಬಲಿಷ್ಠ ರಾಜನಾಗಿರುವ ಆದಿಲ್‌ಷಾಹಿ ಅವರ ಪ್ರಾಂತದ ಮೇಲೆ ಯುದ್ಧ ಸಾರಿದರು. ಈ ಯುದ್ಧದಲ್ಲಿ (ನಿಂಬಸ್) ನಿಂಬಾಳಕರ್ ಅವರ ಪರಾಕ್ರಮ ಹಾಗೂ

೧. ಶ್ರೀ ಯಶವಂತರಾವ್ ಚವ್ಹಾಣ: "ನಿಪ್ಪಾಣಿ ದರ್ಶನ", ಪು.೨೪.

ಯುದ್ಧ ಕೌಶಲ್ಯವನ್ನು ಮೆಚ್ಚಿಕೊಂಡ ಆದಿಲ್‌ಷಾಹಿ ದೊರೆ ಈ ಮನೆತನವನ್ನು ಬಿಜಾಪೂರಕ್ಕೆ ಜೋಡಿಸಿಕೊಂಡನು ಹಾಗೂ ನಿಂಬಾಳಕರ್ ಅವರ ಕಾರ್ಯದಕ್ಷತೆಯನ್ನು ಕಂಡು ಇವರನ್ನು ೧೦೦ ಕುದುರೆಗಳ ಸರ್ದಾರ್‌ರನ್ನಾಗಿ ಮಾಡಿದನು. ಆ ಕಾರಣಕ್ಕಾಗಿಯೇ ನಿಂಬಾಳಕರ್ ಅವರಿಗೆ "ನಾಯಕ" ಅಂತಾ ಅಡ್ಡಹೆಸರು ಬಂದಿತು.

ನಿಂಬಳ ಎಂಬ ಪ್ರದೇಶದಿಂದ ಸುಮಾರು ೬೦೦ ರಿಂದ ೭೦೦ ವರ್ಷಗಳಷ್ಟು ಮೊದಲೇ ಬಿಜಾಪೂರದೆಡೆಗೆ ಹಲವಾರು ಜನ ಇಂಥಹ ಶೂರವೀರರು ಬಂದಿದ್ದರೆಂದು ತಿಳಿದುಬರುತ್ತದೆ. ಬಿಜಾಪೂರ ಆದಿಲ್‌ಷಾಹಿ ದರ್ಬಾರದಿಂದ ಬಂದಂತಹ ನಿಂಬಾಳಕರ್ ದೇಸಾಯಿ ಮನೆತನದವರು "ನನದಿ, ಅಕ್ಕೋಳ, ಅರ್ಜುಣಿ ಎಂಬಲ್ಲಿ ನೆಲೆಯೂರಿದರು." ಇವರು ತಮ್ಮ ಸ್ವಸಾಮರ್ಥ್ಯದಿಂದ ಚಿಕ್ಕೋಡಿ ಭಾಗದ "ನನದಿ" ಎಂಬ ಊರಿನಲ್ಲಿ ತಮ್ಮದೇ ಆದ ವಂಶವನ್ನು ಬೆಳೆಸಿದರು. ಸುಮಾರು ನೂರರಿಂದ ನೂರೈವತ್ತು ವರ್ಷಗಳ ನಂತರ ಈ ಮನೆತನದಿಂದ ಇಬ್ಬರು ಅಣ್ಣತಮ್ಮಂದಿರರು ಅತ್ಯಂತಶೂರರು, ಧೀರರೂ ಆಗಿದ್ದು, ಇದರಲ್ಲಿ ಒಬ್ಬರು ಮುಂಬೈ ಕರ್ನಾಟಕದ ಪಶ್ಚಿಮಕ್ಕೆ ಅಂದರೆ "ಅಕ್ಕೋಳ" ಎಂಬಲ್ಲಿ ಬಂದು ನೆಲೆಸಿದರು. ಈ ಪ್ರದೇಶದಲ್ಲಿ ಇಂದಿಗೂ ಇವರು ನಿರ್ಮಿಸಿದ ಕೋಟೆಯ ಪ್ರದೇಶವನ್ನು ಕಾಣಬಹುದಾಗಿದೆ. ಈಗ ಈ ಸ್ಥಳದಲ್ಲಿಯೇ ಪ್ರೌಢಶಾಲೆಯನ್ನು ಪ್ರಾರಂಭಿಸಿರುವರು ಇನ್ನೊಬ್ಬ ಸಹೋದರ "ಅರ್ಜುಣಿ" ಎಂಬಲ್ಲಿ ತಮ್ಮ ಮನೆತನವನ್ನು ಸ್ಥಾಪಿಸಿನು. ಆದರೆ "ಅಕ್ಕೋಳದ" ವಂಶಸ್ಥರಿಂದ ಕೆಲಕಾಲದ ನಂತರ ಬಂದ ಸಿದ್ದೋಜಿರಾವ್ ನಿಂಬಾಳಕರ್ ಪ್ರಸಿದ್ಧಿಗೆ ಬಂದರು.

**ಸಿದ್ದೋಜಿರಾವ್ ನಿಂಬಾಳಕರ್ ಅವರ ಉದಯ:**

ಅಕ್ಕೋಳದ ಶ್ರೀಮಂತ ಮನೆತನದಲ್ಲಿ ಕ್ರಿ.ಶ. ೧೭೭೪ರಲ್ಲಿ ಜನಿಸಿದ ಸಿದ್ದೋಜಿರಾವ್ ಉರ್ಫ್ ಅಪ್ಪಾಸಾಹೇಬ ನಿಂಬಾಳಕರ್ ಅವರು ಕೊಲ್ಲಾಪೂರ ಛತ್ರಪತಿಯವರ ರಾಣಿ ಮತ್ತು ಸಿದ್ದೋಜಿರಾವ್ ಅವರ ತಾಯಿ ಖಾಸ್ ಅಕ್ಕತಂಗಿಯರಾಗಿದ್ದು ಸಿದ್ದೋಜಿರಾವ್ ಅವರು ಕೊಲ್ಲಾಪೂರದ ಚಿಕ್ಕಮ್ಮನ ಮನೆಯಲ್ಲಿಯೇ ತಮ್ಮ ಬಾಲ್ಯಜೀವನವನ್ನು ಕಳೆದರು.

ಬಿಜಾಪೂರದ ಆದಿಲ್‌ಷಾಹಿ ದರ್ಭಾರದಲ್ಲಿ ಒಂದು ವಿಲಕ್ಷಣವಾದ ಕುದುರೆ ಇತ್ತು. ಅದು ಯಾರನ್ನೂ ಅದರ ಬೆನ್ನಮೇಲೆ ಕುಳಿತುಕೊಳ್ಳಲು ಬಿಡುತ್ತಿರಲಿಲ್ಲ. ಆ ಕಾರಣ ಎಲ್ಲ ಸರದಾರರಿಗೆ ಅದು ಒಂದು ಸವಾಲಾಗಿತ್ತು. ದೊರೆ ಆದಿಲ್‌ಷಾಹಿ ಅವರು ಎಲ್ಲ ಸರದಾರರನ್ನೂ ದರ್ಭಾರಕ್ಕೆ ಆಹ್ವಾನ ನೀಡಿ. ಈ ಕುದುರೆಯ ಮೇಲೆ ಹತ್ತಿಕೊಂಡು ಯಾರು ಎಷ್ಟು ಪ್ರದೇಶವನ್ನು ತಿರುಗಾಡಿ ಬರುತ್ತಾರೋ ಅವರಿಗೆ ಅಷ್ಟು ಪ್ರದೇಶವನ್ನು ಬಹುಮಾನವೆಂದು ಕೊಡುವುದಾಗಿ ಹೇಳುತ್ತ ಅದರಲ್ಲಿ ಈ ಪ್ರದೇಶದ ೧/೪ ಓಸ್ಸಾ

ಆದಿಲ್‌ಷಾಹಿಗೆ ಸಿಗಬೇಕೆಂದು ಪ್ರಕಟಣೆ ಮಾಡಿದರು[೨] ಅದರಂತೆಯೇ ಈ ಸ್ಪರ್ಧೆಯನ್ನು ಸವಾಲಾಗಿ ಸ್ವೀಕರಿಸಿದ ಸಿದ್ದೋಜಿರಾವ್ ಅವರು ಪ್ರಯತ್ನಪಟ್ಟು ಕುದುರೆಯನ್ನು ಹತ್ತಿದರು, ಸೂರ್ಯೋದಯದೊಂದಿಗೆ ಕುದುರೆ ಪ್ರಯಾಣ ಬೆಳೆಸಿದ ಅವರು ಹುಕ್ಕೇರಿ, ಬೆಳಗಾಂವ್, ದಾಂಡೇಲಿ ಈ ಭಾಗದಲ್ಲಿಯ ಸುಮಾರು ೧೭೩ ಹಳ್ಳಿಗಳನ್ನು ತಿರುಗಾಡಿ ಆದಿಲ್‌ಷಾಹಿ ದರ್ಭಾರಿಗೆ ಬಂದರು. ಸುತ್ತಾಡಿ ಸೋತು ಹೋದ ಕುದುರೆಯು ಮರಣವನ್ನಪ್ಪಿತು. ಆದಿಲ್‌ಷಾಹಿ ಅವರ ಅಶ್ವಾಸನೆಯಂತೆ ೧೭೩ ಹಳ್ಳಿಗಳನ್ನು ಬಹುಮಾನವಾಗಿ ನೀಡಿ ಪ್ರಮಾಣಪತ್ರವನ್ನು ಕೊಡುತ್ತ ಆದಿಲ್ ಷಾಹಿಯವರು ಸಿದ್ದೋಜಿರಾವ್ ಅವರಿಗೆ "ನಿಂಬಾಳಕರ್ ನಾಯಕ" ಎಂದು ಹೇಳಿ ಗೌರವಿಸಿದರು. ಈ ಎಲ್ಲ ದೇಶಕತ್‌ನ್ನು ಆದಿಲ್‌ಷಾಹಿ ಅವರಿಂದ ಪಡೆದುದಕ್ಕೆ "ದೇಸಾಯಿ" ಎಂದು ಅಡ್ಡ ಹೆಸರು ಬಂದಿತು. ಇಲ್ಲಿಂದ ಮುಂದೆ ಈ ಮನೆತನಕ್ಕೆ "ದೇಸಾಯಿ ನಿಂಬಾಳಕರ್ ನಾಯಕ" ಎಂದು ಆದಿಲ್ ಷಾಹಿ ಅವರ ದರ್ಭಾರದ ಸರ್ದಾರರೆಲ್ಲಾ ಕರೆಯಲು ಪ್ರಾರಂಭಿಸಿದರು.

ಆದಿಲ್‌ಷಾಹಿ ಅವರ ದರ್ಭಾರದಲ್ಲಿ ನಿಂಬಾಳಕರ್ ಮನೆತನದ ಪುರುಷರೊಬ್ಬರು ಶೂರರು, ಪರಾಕ್ರಮಿಗಳೂ ಅಗಿದ್ದು ತಮ್ಮ ಸ್ವಸಾಮರ್ಥ್ಯದಿಂದಲೇ ಸರ್ಧಾರಿಕೆಯನ್ನು ಪಡೆದುಕೊಂಡರು. ಸಿದ್ದೋಜಿರಾವ್ ಅವರ ಚಾಣಾಕ್ಷತನವನ್ನು ಮೆಚ್ಚಿಕೊಂಡು ಬಿಜಾಪೂರದ ಆದಿಲ್‌ಷಾಹಿ ಈ ಪರಾಕ್ರಮಿಗೆ ಹುಕ್ಕೇರಿ ಸಂಸ್ಥಾನದ ೪೦ ಹಳ್ಳಿಗಳನ್ನು ಬಹುಮಾನ ನೀಡಿ ತಮ್ಮ ಸೈನ್ಯದಲ್ಲಿ ನ್ಯಾಯ ನಿರ್ಣಯಿಸುವ ನಾಯಕನನ್ನಾಗಿ ಮಾಡಿದರು.

ಕೆಲವು ಕಾಲದ ನಂತರ ಇವರ ಆಡಳಿತದಲ್ಲಿ ಬದಲಾವಣೆಗಳು ಕಂಡುಬರಹತ್ತಿದವು. ಮುಂದೆ ಸ್ವತಂತ್ರವಾಗಿ ತಮಗೆ ಬಂದಿರುವ ಹಳ್ಳಿಗಳನ್ನು ನೋಡಿಕೊಂಡು ಹೋಗುತ್ತಿದ್ದರು. ಇವರ ಸಂಸ್ಥಾನದ

ಪಶ್ಚಿಮಕ್ಕೆ – ಬಿಜಾಪೂರದ ಆದಿಲ್‌ಷಾಹಿ ಆಡಳಿತ

ದಕ್ಷಿಣಕ್ಕೆ – ಮೈಸೂರಿನ ಹೈದರಾಲಿಯ ಆಡಳಿತ

ಉತ್ತರಕ್ಕೆ – ಮರಾಠಾ ಪೇಶ್ವೆಗಳ ಆಡಳಿತ

ಹೀಗೆ ಈ ಮೂರು ಸಂಸ್ಥಾನಗಳು ಬೆಳೆದು ಬಂದಿದ್ದು ಇದೇ ಸಮಯದಲ್ಲಿ ಮರಾಠಾ ಪೇಶ್ವೆ ಅವರು ಸಿದ್ದೋಜಿರಾವ್ ನಿಂಬಾಳಕರ್ ದೇಸಾಯಿಯವರ ಪ್ರಾಂತದ ಮೇಲೆ ಯುದ್ಧ ಮಾಡಿ ಅವರು ಗೆದ್ದುಕೊಂಡಿದ್ದ ಹುಕ್ಕೇರಿ ಭಾಗದ ಪ್ರದೇಶಗಳನ್ನು ವಶಪಡಿಸಿಕೊಂಡರು. ಇದರಿಂದಾಗಿ ಕೊಲ್ಲಾಪೂರದ ಮಹಾರಾಜರು ಸಿದ್ದೋಜಿರಾವ್ ನಿಂಬಾಳಕರ್ ಅವರಿಗೆ ತಮ್ಮಲ್ಲಿಯೇ ಉಳಿದುಕೊಳ್ಳಲು ಹೇಳಿದರು.[೩]

---

೨. ಶ್ರೀ ಯಶವಂತರಾವ್ ಚವ್ಹಾಣ: "ನಿಪ್ಪಾಣಿ ದರ್ಶನ", ಪು.೨೫.

೩. ಶ್ರೀ ಜಗದೀಶ್ ಖೋತ: ನಿಪ್ಪಾಣಿ ಭಿತ್ತಿಚಿತ್ರಕಲೆ, (ಡಿಪ್ಲೋಮಾ ಯೋಜನಾ ವರದಿ–೨೦೦೬) ಪು.೭.

ಅದನ್ನು ಒಪ್ಪದ ಸಿದ್ಧೋಜಿರಾವ್ ಅವರು ಅತ್ಯಂತ ಮಹತ್ವಾಕಾಂಕ್ಷಿ ಮತ್ತು ಹಟವಾದಿ ಆಗಿದ್ದು ಸ್ವತಃ ಗಳಿಸಿ ಉಳಿಸಿ ಬೆಳೆಸಬೇಕೆಂಬ ಛಲದಿಂದ ಮನೆಯಿಂದ ಹೊರಬಿದ್ದರು. ಮುಂದೆ ಅರಬಸ್ಥಾನಕ್ಕೆ ಪ್ರಯಾಣಬೆಳಸಿದ ಸಿದ್ಧೋಜಿರಾವ್ ನಿಂಬಾಳಕರ್ ಉತ್ತರ ಹಿಂದೂಸ್ಥಾನಕ್ಕೆ ಹೋಗಿ ಗ್ವಾಲಿಯಾರ್‌ದ ರಾಜಾ ದೌಲತ್‌ರಾವ್ ಸಿಂಧೆ ಅವರ ಬಳಿ ಬಂದು ಅಲ್ಲಿಂದ ಅವರು ಅರಬಸ್ಥಾನಕ್ಕೆ ಪ್ರಯಾಣ ಬೆಳಸಿದರು. ಆ ಸಂದರ್ಭದಲ್ಲಿ ಅರಬಸ್ಥಾನದಲ್ಲಿ ಪ್ರಮುಖವಾದ ಎರಡು (ಪಂಗಡ) ಪಂಥಗಳಾದ "ಸಿಯಾ ಮತ್ತು ಸುನ್ನಿ" ಪ್ರಬಲ ಪಂಗಡಗಳಾಗಿದ್ದು, ಇವುಗಳು ತಮ್ಮ ತಮ್ಮಲ್ಲಿಯೇ ಎದ್ದಿರುವ ಒಳಜಗಳಗಳಿಂದಾಗಿ ಜರ್ಜರಿತಗೊಂಡಿದ್ದವು ಆ ಸಂದರ್ಭದಲ್ಲಿ ಅರಬಸ್ಥಾನಕ್ಕೆ ಪ್ರವೇಶ ಮಾಡಿದ ಸಿದ್ಧೋಜಿರಾವ್ ನಿಂಬಾಳಕರ್ ಅವರು ತಮ್ಮ ಕಾರ್ಯದಕ್ಷತೆ ಹಾಗೂ ಚಾಣಾಕ್ಷತನದಿಂದ ಈ ಎರಡೂ ಪಂಥಗಳಲ್ಲಿ ಉದ್ಭವಿಸಿರುವ ಸಮಸ್ಯೆಗೆ ಪರಿಹಾರ ಕಂಡುಕೊಂಡು ಎರಡೂ ಪಂಥಗಳಿಗೆ ಒಪ್ಪಿಗೆಯಾಗುವಂತೆ ಸಮಸ್ಯೆಯನ್ನು ಬಗೆಹರಿಸಿದರು. ಇದರಿಂದಾಗಿ ಇವರಿಗೆ ಅಲ್ಲಿನ (ಕಲಿಫಾ) ಧರ್ಮಗುರುಗಳಿಂದ ಹಾಗೂ ಶ್ರೀಮಂತ ಜನರಿಂದ ಬಹಳ ದೊಡ್ಡ ಸಹಾಯವೇ ದೊರೆಯಿತು. ಸಿದ್ಧೋಜಿರಾವ್ ನಿಂಬಾಳಕರ್ ಅವರಿಗೆ "ಯಾವುದೇ ವೇಳೆಯಲ್ಲಿ ೧೨ ಸಾವಿರ ಸೈನ್ಯದ ನೆರವನ್ನು ನೀಡುವುದಾಗಿ ವಾಗ್ದಾನ ನೀಡಿದರು." ಅಂತೆಯೇ ಕೆಲವೊಂದು ಸೈನಿಕರೊಂದಿಗೆ ಹಿಂದುಸ್ಥಾನಕ್ಕೆ ಆಗಮಿಸಿದ ಸಿದ್ಧೋಜಿರಾವ್ ನಿಂಬಾಳಕರ್ ಅವರು ಗ್ವಾಲಿಯಾರ್‌ದ ರಾಜಾ ದೌಲತ್‌ರಾವ್ ಸಿಂಧೆ ಅವರ ಬಳಿ ಬಂದು ಸೈನ್ಯದ ಸರ್ಧಾರ್‌ರಾದರು ಆದರೆ ಅವರು ಅಲ್ಲಿಯೂ ನಿಲ್ಲದೇ ತಮ್ಮ ಸೈನ್ಯದೊಂದಿಗೆ ಇಂದೂರ್ ಪೂನಾ ಮುಂತಾದ ಕಡೆ ಪ್ರವಾಸ ಮಾಡುತ್ತ ಕೊಲ್ಲಾಪೂರಕ್ಕೆ ಬಂದರು.

ಕೊಲ್ಲಾಪೂರದ ಎರಡನೇ ಛತ್ರಪತಿ ಶಿವಾಜಿಯವರು ಇವರನ್ನು ತಮ್ಮ ನಾಯಕರೆಂದು ತಮ್ಮ ಆಸ್ಥಾನದಲ್ಲಿ ನೇಮಕ ಮಾಡಿಕೊಂಡರು. ಹಾಗೂ ಸಿದ್ಧೋಜಿರಾವ್ ನಿಂಬಾಳಕರ್ ಅವರಿಗೆ ತಿಂಗಳಿಗೆ ಹನ್ನೆರಡು ಸಾವಿರ ರೂಪಾಯಿ ವೇತನ ನಿಗದಿ ಮಾಡಿದರು. ಒಂದು ದಿನ ಛತ್ರಪತಿ ಶಿವಾಜಿಯವರು ಶಿಖಾರಿಗೆ ಹೋದಾಗ ಅವರ ಮೇಲೆ ಏಳು ಹುಲಿಗಳು ಎರಡು ಹೆಣ್ಣು, ಒಂದು ಗಂಡು, ನಾಲ್ಕು ಮರಿಗಳು, ಒಟ್ಟಿಗೆ ಎರಗಿದಾಗ ಛತ್ರಪತಿಶಿವಾಜಿ ಮಹಾರಾಜರು ಅಪಾಯದಲ್ಲಿರುವುದನ್ನು ಗಮನಿಸಿದ ಸಿದ್ಧೋಜಿರಾವ್ ನಿಂಬಾಳಕರ್ ಅವರು ಕಾರ್ಯಪ್ರವೃತ್ತರಾಗಿ ಏಳೂ ಹುಲಿಗಳನ್ನು ಹೊಡೆದುರುಳಿಸಿದರು. ಈ ಅಪಾಯದಿಂದ ಎರಡನೇ ಛತ್ರಪತಿ ಶಿವಾಜಿ ಮಹಾರಾಜರನ್ನು ರಕ್ಷಿಸಿದ್ದಕ್ಕಾಗಿ ಆನಂದಿತರಾದ ಮಹಾರಾಜರು ತಮ್ಮ ದರ್ಭಾರದಲ್ಲಿ ಸಿದ್ಧೋಜಿರಾವ್ ನಿಂಬಾಳಕರ್ ಅವರನ್ನು ಸನ್ಮಾನಿಸಿ ಅವರಿಗೆ ತಮ್ಮ ಬಲಭಾಗದಲ್ಲಿಯೇ ಕುಳಿತುಕೊಳ್ಳುವುದಕ್ಕೆ ಸಿಂಹಾಸನವನ್ನು ನೀಡಿದರು. ಇದೇ ಸಂಪ್ರದಾಯ ಮುಂದುವರೆಸಿಕೊಂಡು ಹೋಗುತ್ತಿದ್ದರೂ ಸಿದ್ಧೋಜಿರಾವ್ ನಿಂಬಾಳಕರ್ ಅವರು ತಮ್ಮ ಸ್ವರಾಜ್ಯವಾದ

ಅಕ್ಕೋಳಕ್ಕೆ ಬರಲು ನಿರ್ಧರಿಸಿದರು. ಎರಡನೇ ಛತ್ರಪತಿ ಶಿವಾಜಿಯವರು ತಮ್ಮ ಆಸ್ಥಾನದಲ್ಲಿಯೇ ಮುಂದುವರಸಿಕೊಂಡು ಹೋಗಲು ಎಷ್ಟು ಹೇಳಿದರೂ ಕೇಳದಾದಾಗ ಕೆಲವು ಊರುಗಳನ್ನು ಬಹುಮಾನವೆಂದು ಎರಡನೇ ಛತ್ರಪತಿ ಶಿವಾಹಿಯವರು ಸಿದ್ದೋಜಿರಾವ್ ನಿಂಬಾಳಕರ್ ಅವರಿಗೆ ಕೊಟ್ಟು ಬೀಳ್ಕೊಟ್ಟರು ಮರಳಿ ತಮ್ಮ ಸ್ವರಾಜ್ಯವಾದ ಅಕ್ಕೋಳಕ್ಕೆ ಬಂದು ತಮಗೆ ನೀಡಿದ ಸೀಮೆಯನ್ನು ಗುರುತಿಸಿಕೊಂಡು ಸಂರಕ್ಷಣೆಗಾಗಿ ಕೆಲವು ಬೇಡರ ಜನರನ್ನು ನೇಮಿಸಿದರು.

ಮರಾಠಾ ಪೇಶ್ವೆ ಅವರು ಸಿದ್ದೋಜಿರಾವ್ ನಿಂಬಾಳಕರ್ ದೇಸಾಯಿ ಅವರಿಂದ ಗೆದ್ದುಕೊಂಡ ಹುಕ್ಕೇರಿ ಪ್ರಾಂಥದಲ್ಲಿಯ ಹಳ್ಳಿಗಳನ್ನು ಅಂದರೆ ನಿಪ್ಪಾಣಿ, ಜತ್ರಟ, ಕೋಡಗಿ, ಶಿರಗುಪ್ಪಿ, ಕೋಗನೊಳ್ಳಿ, ಸುಳಗಾಂವ್ ಮತ್ತು ಮತ್ತಿವಡೆ, ಕಣಗಿಲೆ ಹೀಗೆ ಹಳ್ಳಿಗಳನ್ನು ಪೇಶ್ವೆ ಅವರಿಂದ ಮರಳಿ ಗೆದ್ದುಕೊಂಡರು (ಇವರ ಪೂರ್ವಜರು ಈ ಭಾಗದಲ್ಲಿ ಅನೇಕ ಬಾರಿ ದಂಡಯಾತ್ರೆಗಳನ್ನು ಮಾಡಿ ಬಹಳಷ್ಟು ಸಿರಿ ಸಂಪತ್ತುಗಳನ್ನು ಕೂಡಿ ಹಾಕಿಕೊಂಡಿದ್ದರು) ಇದಾದ ಕೆಲವು ದಿನಗಳಲ್ಲಿಯೇ ಮರಾಠಾ ದೊರೆ ದೊಡ್ಡ ಮಾಧವರಾವ್ ಪೇಶ್ವೆ ಅವರು ದಕ್ಷಿಣ ಪ್ರಾಂತಗಳತ್ತ ಯುದ್ಧವನ್ನು ಸಾರಿದರು. ಆ ವೇಳೆಯಲ್ಲಿ ಸಿದ್ದೋಜಿರಾವ್ ನಿಂಬಾಳಕರ್ ಅವರ ಸಹಾಯದಿಂದಾಗಿ ಸವಣೂರಿನ ನವಾಬ ಮತ್ತು ಮೈಸೂರಿನ ಹೈದರಲಿ ಅವರ ಸೈನ್ಯವನ್ನು ಹಿಮ್ಮೆಟ್ಟಿಸಿ ಬೆಳಗಾಂವ್‌ದಿಂದ ಧಾರವಾಡದವರೆಗೆ ಪ್ರಾಂಥವನ್ನು ಗೆದ್ದುಕೊಂಡರು. ಈ ವೇಳೆಯಲ್ಲಿ ಸೂಕ್ತ ಸಲಹೆ ಸಹಕಾರಗಳನ್ನು ನೀಡುತ್ತ ಯುದ್ಧದಲ್ಲಿ ಪಾಲ್ಗೊಂಡ ಸಿದ್ಧೋಜಿರಾವ್ ನಿಂಬಾಳಕರ್ ಅವರ ಸಾಧನೆಯನ್ನು ಮೆಚ್ಚಿಕೊಂಡ ದೊಡ್ಡ ಮಾಧವರಾವ್ ಪೇಶ್ವೆ ಅವರು ವಿಜಯೋತ್ಸವದೊಂದಿಗೆ ಮರಳಿ ಪುಣೆಯೆಡೆಗೆ ಹೊರಟಾಗ ತಮ್ಮ ಸಂಸ್ಥಾನಕ್ಕೆ ಪೇಶ್ವೆ ಅವರನ್ನು ಆಮಂತ್ರಿಸಿ ತಮ್ಮ ದರ್ಬಾರ್‌ದಲ್ಲಿ ಸಿದ್ದೋಜಿರಾವ್ ನಿಂಬಾಳಕರ್ ದೇಸಾಯಿಯವರು "ದೊಡ್ಡ ಮಾಧವರಾವ್ ಪೇಶ್ವೆ ಅವರಿಗೆ "ಮುತ್ತಿನ ಅಭಿಷೇಕ ಮಾಡಿದರು." ಇದರಿಂದ ಹರ್ಷಭರಿತರಾದ ದೊಡ್ಡ ಮಾಧವರಾವ್ ಪೇಶ್ವೆ ಅವರು ಪ್ರತಿಯಾಗಿ ಸಿದ್ದೋಜಿರಾವ್ ನಿಂಬಾಳಕರ್ ದೇಸಾಯಿ ಅವರಿಗೆ ಹನ್ನೆರಡು ಊರುಗಳ ದೇಸ್ಕತ್ತು ನೀಡಿ "ಸರ್ ಲಷ್ಕರ್" ಎಂಬ ಬಿರುದು ನೀಡಿ ಸನ್ಮಾನಿಸಿ ಪುಣೆಯತ್ತ ಪ್ರಯಾಣ ಬೆಳೆಸಿದರು."[೪]

**ನಿಪ್ಪಾಣಿ ನಗರ ರಚನೆ:**

ಲಖನಾಪೂರ, ವಾಳಕಿ, ಗವಾಸಿ, ಶಿವಪೂರ, ಅರ್ಜುಣಿಯಮಗರಣಿ, ನಿಪ್ಪಾಣಿ, ಲೇಂಡ್‌ವಾಡಿ, ನಿಪ್‌ನಾಳ್ ಇವುಗಳನ್ನು ಒಳಗೊಂಡ ಈ ಸಂಸ್ಥಾನದಲ್ಲಿ ಸಿದ್ದೋಜಿರಾವ್ ನಿಂಬಾಳಕರ್ ದೇಸಾಯಿಯವರು ಲೇಂಡ್‌ವಾಡಿ (ಎರಂಡ್‌ವಾಡಿ) ಮತ್ತು ಸಾಖರ್‌ವಾಡಿ ಇವೆರಡನ್ನೂ ನಿಪ್ನಾಳ್‌ದಲ್ಲಿ ಸೇರಿಸಿ "ನಿಪ್ಪಾಣಿ ನಗರವೆಂದು" ಸಂಸ್ಥಾಪಿಸಿದರು. ಈ ನಗರವು ತಮ್ಮ ಸಂಸ್ಥಾನದ ಪ್ರಮುಖ ಪಟ್ಟಣವಾಗಿ ರೂಪುಗೊಂಡಿತು. ಅಕ್ಕೋಳ ಮನೆತನದಲ್ಲಿನ ಪರಾಕ್ರಮಿ ಪುರುಷ ನಿಪ್ಪಾಣಿ ನಗರದ ಸಂಸ್ಥಾಪಕ ಸಿದ್ದೋಜಿರಾವ್ ಉರ್ಫ್

೪. ಶ್ರೀ ಯಶವಂತರಾವ್ ಚವ್ಹಾಣ: "ನಿಪ್ಪಾಣಿ ದರ್ಶನ", ಪು.೨೬.

ಅಪ್ಪಾಸಾಹೇಬ್ ನಿಂಬಾಳಕರ್ ದೇಸಾಯಿ ಎಂದು ಪ್ರಸಿದ್ಧರಾದರು. ಅಂತೆಯೇ ಶೂರರೂ, ಧೀರರೂ, ಧಾರ್ಮಿಕ ನಾಯಕರೂ ಆಗಿ ಬೆಳೆದು ಬಂದ ಸರ್ಧಾರ್ ಸಿದ್ಧೋಜಿರಾವ್ ನಿಂಬಾಳಕರ್ ದೇಸಾಯಿಯವರು ನಿಪ್ಪಾಣಿ ಸುತ್ತಮುತ್ತಲಿನ ಪ್ರದೇಶಗಳನ್ನು ಗೆದ್ದುಕೊಂಡು, ನಿಪ್ಪಾಣಿ ನಗರವನ್ನು ಮುಖ್ಯಸ್ಥಾನವನ್ನಾಗಿ ಮಾಡಿಕೊಂಡರು.[೫] ಕೇವಲ ಇಪ್ಪತ್ತರಿಂದ ಇಪ್ಪತ್ತೈದು ವರುಷಗಳಲ್ಲಿಯೇ ಈ ನಗರವನ್ನು ಸದ್ಯದ ಬೆಳಗಾಂವ್ ಒಳಗೊಂಡಂತೆ ಬಿಜಾಪೂರದವರೆಗೂ ಇತ್ತ ಕೊಲ್ಲಾಪೂರದವರೆಗೂ ತಮ್ಮ ಸಂಸ್ಥಾನದ ಬೆಳವಣಿಗೆ ಮಾಡಿ ತಮ್ಮ ಪ್ರಭುತ್ವವನ್ನು ಸ್ಥಾಪಿಸಿದರು. ನಿಪ್ಪಾಣಿ ನಗರವು ಕೊಲ್ಲಾಪೂರ ಸಂಸ್ಥಾನಕ್ಕೆ ಹತ್ತಿರವಿರುವುದರಿಂದ ಸಿದ್ಧೋಜಿರಾವ್ ನಿಂಬಾಳಕರ್ ಅವರನ್ನು ನಿಪ್ಪಾಣಿಕರ್ ಎಂದೂ ಕರೆಯುವುದುಂಟು ಈ ನಿಪ್ಪಾಣಿನಗರ ರಚನೆಯ ಮೂಲ ಪುರುಷನಾದ್ದರಿಂದ "ನಿಪ್ಪಾಣಿಕರ್" ಎಂದು ಕರೆಯುವುದು ಸೂಕ್ತವೇ ಆಗಿತ್ತು ಎಂಬುದು ತಿಳಿದುಬರುತ್ತದೆ. ಜೊತೆಗೆ ಕೊಲ್ಲಾಪೂರದ ಛತ್ರಪತಿ ಅವರೊಂದಿಗೆ ಯಾವಾಗಲೂ ನಿಕಟವಾದ ಹೊಂದಾಣಿಕೆಯನ್ನು ಹೊಂದಿ ಉತ್ತಮ ಸಂಬಂಧವನ್ನು ಬೆಳೆಸಿಕೊಂಡಿದ್ದರು. ಹೀಗಾಗಿ ಸಣ್ಣಪುಟ್ಟ ಇನಾಮ್‌ದಾರರು, ಜಹಾಗೀರ್‌ದಾರರೂ ಇವರಿಗೆ ಶರಣಾದರು ಈ ರೀತಿಯಾಗಿ ಸಿದ್ಧೋಜಿರಾವ್ ನಿಂಬಾಳಕರ್ ಅವರು ಸಿದ್ಧೋಜಿರಾವ್ ನಿಪ್ಪಾಣಿಕರ್ ದೇಸಾಯಿಯಾಗಿ ಮಾರ್ಪಟ್ಟರು. ಅವರು ನಿಷ್ಠುರ ನಿಷ್ಪಕ್ಷಪಾತ, ಪ್ರಾಮಾಣಿಕ ನ್ಯಾಯ ನಿರ್ಣಯದಲ್ಲಿ ಚತುರರಾಗಿದ್ದು ಪರಾಕ್ರಮಿಯೂ ಆಗಿದ್ದು ಈ ಭಾಗದಲ್ಲಿ ಸಿದ್ಧೋಜಿರಾವ್ ನಿಂಬಾಳಕರ್ ಅವರಿಗೆ ನಿಪ್ಪಾಣಿಕರ್ ಸರ್ಕಾರವೆಂದೂ ಕರೆಯುವದುಂಟು. ಅವರೊಬ್ಬ ನಿಷ್ಠಾವಂತ ಸರ್ಧಾರ್‌ರಾಗಿಯೇ ಕೊನೆಯವರೆಗೂ ಗುರುತಿಸಿಕೊಂಡು ಇವರು ರಾಜನಲ್ಲಿರುವ ಎಲ್ಲ ಚತುರತೆಯನ್ನೂ ಪಡೆದುಕೊಂಡವರಾಗಿದ್ದರು.

**ರಾಜಕೀಯ, ಸಾಮಾಜಿಕ ಹಾಗೂ ಧಾರ್ಮಿಕವಾಗಿ ಗುರುತಿಸಿಕೊಂಡ ಸಿದ್ಧೋಜಿರಾವ್ ಅವರು :**

ತಮ್ಮ ಪ್ರಾಂತದಲ್ಲಿಯ ಶ್ರೀಮಂತ ನಾಗರಿಕರಿಂದ ರಾಜ್ಯದ ಕೋಶಬೆಳವಣಿಗೆಗಾಗಿ ನಿಧಿ ಸಂಗ್ರಹಿಸಿದರು. ಧಾರ್ಮಿಕ ನಾಯಕನಾಗಿ ಸಿದ್ಧೋಜಿರಾವ್ ನಿಂಬಾಳಕರ್ ದೇಸಾಯಿಯವರು ಶ್ರೀ ವಿರುಪಾಕ್ಷೇಶ್ವರರಲ್ಲಿ ಅತ್ಯಂತ ಶ್ರದ್ಧೆ ಭಕ್ತಿಯನ್ನು ಹೊಂದಿದ್ದು ನಿಪ್ಪಾಣಿಯಲ್ಲಿ ಅವರಿಗಾಗಿ ಒಂದು ಮಠವನ್ನು ನಿರ್ಮಿಸಿಕೊಟ್ಟನು. ಹಾಗೆಯೇ ಸಂಕೇಶ್ವರದ ಹಿರಣ್ಯಕೇಸಿ ನದಿಯ ದಡದಲ್ಲಿ ಶಂಕರಾಚಾರ್ಯರ ದೊಡ್ಡದಾದ ಮಠವನ್ನು ಕಟ್ಟಿಸಿದರು. ಮಮದಾಪೂರದಲ್ಲಿ ತಮ್ಮ ಕುಲದೇವತೆಯಾದ ಶ್ರೀ ತುಳಜಾಭವಾನಿ ದೇವಿಯ ಭವ್ಯವಾದ ಸುಂದರ ಮಂದಿರವನ್ನು ಕಟ್ಟಿಸಿದರು. ಇದಲ್ಲದೇ ಸಿದ್ಧೋಜಿರಾವ್ ನಿಂಬಾಳಕರ್ ದೇಸಾಯಿಯವರು ಮೇಲಿಂದ ಮೇಲೆ ಕಾಶಿರಾಮೇಶ್ವರ ಕ್ಷೇತ್ರಕ್ಕೆ ಭೇಟಿ ನೀಡುತ್ತಿದ್ದರು. ಅಲ್ಲಿ ಇವರ ಮನೆತನದ ಗುರುಗಳಾದ ಭಗವಂತ ಶ್ರೀ ಚಿದಂಬರ ಸ್ವಾಮಿಗಳನ್ನು ಕಾಣುತ್ತಿದ್ದರು. ಆಗ ಸ್ವಾಮಿಗಳು ತಮ್ಮ ನೆನಪಿಗಾಗಿ ಒಂದು

---

೫. ಶ್ರೀ ಯಶವಂತರಾವ್ ಚವ್ಹಾಣ: "ನಿಪ್ಪಾಣಿ ದರ್ಶನ", ಪು. ೨೭.

"ಸ್ಪಟಿಕದ ಲಿಂಗವನ್ನು" ಇವರಿಗೆ ಆಶೀರ್ವಾದ ರೂಪದಲ್ಲಿ ನೀಡಿದರು. ಅದನ್ನು ನಿಪ್ಪಾಣಿಗೆ ತಂದು ತಮ್ಮ ಮನೆಯಲ್ಲಿ ಪ್ರತಿಷ್ಠಾಪಿಸಿದರು.[೬] ಈಗಲೂ ಆ ಸ್ಪಟಿಕದಲಿಂಗ ಸಿದ್ದೋಜಿರಾವ್ ನಿಂಬಾಳಕರ್ ಅವರ ರಾಜವಾಡೆಯಲ್ಲಿ ಪೂಜೆಗೊಳ್ಳುತ್ತಾ ಕಂಗೊಳಿಸುತ್ತದೆ. ಈ ಲಿಂಗವು ಸಂಪೂರ್ಣ ಪಾರದರ್ಶಕವಾಗಿದ್ದು, ಇಂಥದೇ ಇನ್ನೊಂದು ಲಿಂಗ ರಾಯಘಡದಲ್ಲಿ ಇರುವುದಾಗಿಯೂ ಹೇಳುತ್ತ ಇಂಥಹ ವೈಶಿಷ್ಟ್ಯಪೂರ್ಣವಾದ ಲಿಂಗಗಳು ಭಾರತದಲ್ಲಿಯೇ ಇವೆರಡೇ ಎನ್ನುವುದು ಮಹತ್ವಪೂರ್ಣವಾದುದಾಗಿದೆ.

ಕಲಾಕ್ಷೇತ್ರದಲ್ಲಿಯೂ ಇವರಿಗೆ ತುಂಬಾ ಆಸಕ್ತಿ ಇದ್ದಿತು. ಸಂಗೀತಗಾರರು, ಚಿತ್ರಕಲಾವಿದರು ಇವರ ಅಶ್ರಯದಲ್ಲಿದ್ದುದು ಕಂಡು ಬರುತ್ತದೆ. ಅಂತೆಯೇ ಈಗಲೂ ಇವರ ಮನೆಯಲ್ಲಿಯ ನೂರಾರು ಭಿತ್ತಿ ಚಿತ್ರಗಳನ್ನು ಚಿತ್ರಿಸಿದ್ದು ನಮಗೆಲ್ಲ ಪುಷ್ಠಿಕೊಡುತ್ತವೆ. ಅಥಣಿಯ ನಿಪ್ಪಾಣಿಕರ್ ವಾಡೆಯಲ್ಲಿ ಹಾಗೂ ನಿಪ್ಪಾಣಿಯ ವಾಡೆ ಭಿತ್ತಿಚಿತ್ರಗಳನ್ನು ಕಾಣಬಹುದಾಗಿದೆ. ಈ ಚಿತ್ರಗಳ ರಚನೆಗೆ ಶೈವ, ವೈಷ್ಣವ ಧರ್ಮಗಳಿಗನುಸರಿಸಿದ ಹಾಗೂ ಸಾಮಾಜಿಕ ಕಳಕಳಿಯನ್ನು ವ್ಯಕ್ತಪಡಿಸುವ ಚಿತ್ರಗಳು ನಮಗೆ ದೊರೆಯುತ್ತವೆ. ಈ ಕಿರುರೂಪಚಿತ್ರಗಳು ಭಿತ್ತಿಯಲ್ಲಿ ಉಜ್ವಲವರ್ಣಗಳೊಂದಿಗೆ ಕಂಗೊಳಿಸುತ್ತವೆ.

ಸಾಮಾಜಿಕವಾಗಿ ಹಾಗೂ ರಾಜಕೀಯವಾಗಿಯೂ ಸಾಕಷ್ಟು ಕೆಲಸವನ್ನು ಮಾಡಿದ ಸಿದ್ದೋಜಿರಾವ್ ನಿಂಬಾಳಕರ್ ಅವರು ಭುವಿಕೋಟ ಕೋಟೆಯನ್ನು ಕ್ರಿ.ಶ.೧೭೭೯ರಲ್ಲಿ ಕಟ್ಟಿಸಿದರು.[೭] ಕೋಟೆಯ ಸುತ್ತಲೂ ರಕ್ಷಣೆಗಾಗಿ ಆಳವಾದ ನೀರನ್ನು ತುಂಬಿದ ಕಂದಕಗಳನ್ನು ನಿರ್ಮಿಸಿದರು ನೀರು ಸರಬರಾಜಿಗಾಗಿ ಅಲ್ಲಲ್ಲಿ ಗಾರೆಯಿಂದ ರಚಿಸಲ್ಪಟ್ಟ ನೀರಿನ ತೊಟ್ಟಿಗಳನ್ನು ನಿರ್ಮಿಸಿದರು. ಶಿರಗುಪ್ಪಿ ಹತ್ತಿರ ಒಂದು ದೊಡ್ಡದಾದ ಕೆರೆಯನ್ನು ನಿರ್ಮಿಸಿದರು. ಈ ಕೆರೆಯಿಂದ ಕಾಲುವೆಯ ಮುಖಾಂತರ ನಗರಕ್ಕೆ ನೀರು ಸರಬರಾಜು ಮಾಡುವ ವ್ಯವಸ್ಥೆ ಮಾಡಿದರು. ಅದೇ ರೀತಿಯಲ್ಲಿ ವಸತಿಗೃಹಗಳನ್ನು ನಿರ್ಮಿಸಿದರು. ನಗರದ ನಾಗರಿಕರಿಗೆ ಅನುಕೂಲವಾಗಲೆಂದು ಸಿದ್ದಾಪೂರ ಪೇಟೆ, ಬೀಮಾಪೂರ ಪೇಟೆ, ಗುರುವಾರ ಪೇಟೆ, ರಾಣಾಪೇಟೆ ಎಂದು ವ್ಯಾಪಾರಿ ಮಾರ್ಕೇಟ ಸಮುಚ್ಚಯಗಳನ್ನು ನಿರ್ಮಿಸಿದರು. ಇದರಿಂದಾಗಿ ಅನೇಕ ವ್ಯಾಪಾರಸ್ತರಿಗೆ ಅನುಕೂಲವಾಯಿತು. ನಿಪ್ಪಾಣಿಯ ಉತ್ತರಕ್ಕಿರುವ ಕೃಷ್ಣಾನದಿಯ ದಂಡೆಯಲ್ಲಿ ಕಲ್ಲೋಳ ಎಂಬಲ್ಲಿ ಸ್ನಾನಗೃಹಗಳನ್ನು ನಿರ್ಮಿಸಿದರು ಅಲ್ಲಿಂದ ಎಕ್ಸಂಬಾ ಊರಿನವರೆಗೆ ದೊಡ್ಡದಾದ ರಸ್ತೆ ನಿರ್ಮಾಣವನ್ನು ಮಾಡಿಸಿದರು. ಸಂಕೇಶ್ವರ ಸಮೀಪದ ಹಿರಣ್ಯಕೆರೆ ನದಿಯ ದಡದಲ್ಲಿ ಇದೇ ರೀತಿಯ ಘಾಟ ನಿರ್ಮಿಸಿದರು. ರಾಜಕೀಯವಾಗಿ ಸಾಕಷ್ಟು ಬಲಿಷ್ಠರಾಗಿದ್ದ ಸಿದ್ದೋಜಿರಾವ್ ನಿಂಬಾಳಕರ್ ದೇಸಾಯಿಯವರು ಸೈನ್ಯದ ಬಲವನ್ನು ಹೆಚ್ಚಿಸಿಕೊಂಡಿದ್ದರು. ಸೈನ್ಯದಲ್ಲಿ ನೂರಾರು ಅರಬಸ್ಥಾನದ ಕುದುರೆ ಸವಾರರು ಮತ್ತು ಪದಾತಿ

---

೬. ಶ್ರೀ ಯಶವಂತರಾವ್ ಚವ್ಹಾಣ: "ನಿಪ್ಪಾಣಿ ದರ್ಶನ", ಪು.೩೦.
೭. ಶ್ರೀ ಯಶವಂತರಾವ್ ಚವ್ಹಾಣ: "ನಿಪ್ಪಾಣಿ ದರ್ಶನ", ಪು.೩೫.

ದಳದವರು ಅಲ್ಲದೇ ಒಂದು ತೋಪುಖಾನೆ ಇತ್ತು. ಈ ಎಲ್ಲ ಸೈನ್ಯಬಲದಿಂದ ಅನೇಕ ಹೋರಾಟಗಳನ್ನು ಮಾಡಿದರು.

**ಅನಂತಪೂರ ಕೋಟೆಯನ್ನು ವಶಪಡಿಸಿಕೊಂಡಿದ್ದು:**

ಈ ಕೋಟೆ (ಕಿಲ್ಲೆ)ಯ ಕುರಿತು ಒಂದು ವಿಶೇಷವಾದ ಕಥೆಯೇ ಇದೆ. ಇದೊಂದು ಗಟ್ಟಿಮುಟ್ಟಾದ ಕೋಟೆಯಾಗಿದ್ದು, ಈ ಕೋಟೆಯ ಒಳಗಡೆಗೆ ಗುಂಗೆ (ಭುಂಗೆ) ಹುಳುಗಳನ್ನು ದೊಡ್ಡ ಪ್ರಮಾಣದಲ್ಲಿ ಸಾಕಿದ್ದರು. ಈ ಕೋಟೆಗೆ ಮುತ್ತಿಗೆಯನ್ನು ಯಾರಾದರೂ ಹಾಕಿದರೆ ಕೋಟೆಯ ಒಳಗಿನ ಜನರು ಈ ಭುಂಗೆಯ ಹುಳುಗಳನ್ನು ಎಬ್ಬಿಸಿಬಿಡುತ್ತಿದ್ದರು. ಆಗ ಶತೃಗಳ ಮೇಲೆ ರೊಚ್ಚಿಗೆದ್ದ ಗುಂಗೆಯ ಹುಳುಗಳು ಅಕ್ರಮಣ ಮಾಡಿ ಕಚ್ಚಿಬಿಡುತ್ತಿದ್ದವು. ಈ ಹಲ್ಲೆಯಿಂದ ಶತೃಗಳು ತಪ್ಪಿಸಿಕೊಳ್ಳುವುದು ಸಾಧ್ಯವೇ ಆಗುತ್ತಿರಲಿಲ್ಲ. ನೈಸರ್ಗಿಕವಾದ ಈ ತಂತ್ರವನ್ನು ಸೂಕ್ತವಾಗಿ ಹಲ್ಲೆಗೆ ಬಳಸಿಕೊಳ್ಳುತ್ತಿರುವ ಜಾಣ್ಮೆ ಮೆಚ್ಚುವಂತಹದಾಗಿತ್ತು. ಇದರಿಂದಾಗಿ ಯಾರಿಗೆ ಆಗಲಿ ಈ ಕೋಟೆಯನ್ನು ವಶಪಡಿಸಿಕೊಳ್ಳುವುದು ಕಷ್ಟದಾಯಕವಾಗಿತ್ತು. ಆ ವೇಳೆಯಲ್ಲಿ ಕೊಲ್ಹಪೂರದ ಛತ್ರಪತಿಯವರು “ಯಾರಾದರೂ ಈ ಕೋಟೆಯನ್ನು ಗೆದ್ದುಕೊಂಡರೆ ಅವರಿಗೆ ತಮ್ಮ ಮಗಳನ್ನು ಕೊಡುವುದಾಗಿ (ಜಾಹೀರ್) ಡಂಗುರ ಸಾರಿದರು” ಈ ಆಹ್ವಾನವನ್ನು ಸವಾಲಾಗಿ ಸ್ವೀಕರಿಸಿದ ಸ್ರೀ ಸಿದ್ಧೋಜಿರಾವ್ ನಿಂಬಾಳಕರ್ ದೇಸಾಯಿಯವರು ಈ ಕೋಟೆಯ ಕುರಿತು ಅಧ್ಯಯನ ಮಾಡಿದರು. ಮೊದಲಿಗೆ ಅಲ್ಲಿಯ ಆಚಾರ್ಯರನ್ನು ತಮ್ಮ ಅಧೀನಕ್ಕೆ ತೆಗೆದುಕೊಂಡರು. ಮಾರುವೇಷದಲ್ಲಿ ಅಲ್ಲಿಗೆ ಹೋಗಿ ಮಾಹಿತಿಯನ್ನು ಕಲೆಹಾಕಿ ತಂದರು. ಮೊದಲು ಆ ಕೋಟೆಯಲ್ಲಿದ್ದ ಭುಂಗೆ (ಗುಂಗೆ)ಯ ಹುಳುಗಳನ್ನು ಆಚಾರ್ಯರ ಸಹಾಯದಿಂದ ಸರ್ವನಾಶಗೊಳಿಸಿದರು. ಅನಂತರ ಅವರ ಮೇಲೆ ಯುದ್ಧಮಾಡಿ ಕೋಟೆಯನ್ನು ಗೆದ್ದುಕೊಂಡರು. ಅಲ್ಲಿದ್ದ ಸಂಪತ್ತನ್ನು ದೋಚಿಕೊಂಡು ಬಂದರು. ಅನಂತರ ಕೊಲ್ಹಾಪೂರದ ಛತ್ರಪತಿ ಶಿವಾಜಿಯವರೆಗೆ ತಾವು ಕೊಟ್ಟಿರುವ ವಚನವನ್ನು ಪಾಲಿಸುವಂತೆ ಹೇಳಿದರು. ಪ್ರಕಟಣೆಗೆ ಅನುಗುಣವಾಗಿ ಮಹಾರಾಜರು ನಡೆದುಕೊಳ್ಳಲಿಲ್ಲ ಇದಕ್ಕೆ ಕಾರಣವಿಷ್ಟೆ ಕೊಲ್ಲಾಪೂರದ ರಾಜನ ಮಗಳು ಈ ಪ್ರಕಟಣೆಯನ್ನು ತಿರಸ್ಕರಿಸಿದಳು. ತಾನು ಮಹಾರಾಜನ ಮಗಳಾಗಿದ್ದು ಕೇವಲ ಒಬ್ಬ ತಮ್ಮ ಸೈನ್ಯದ ಸರದಾರನನ್ನು ವರಿಸಲಾರೆ ಎಂದು ತಿಳಿಸಿದಳು. ಈ ವಾಗ್ದಾನ ಮುರಿಯಲು ಪ್ರಮುಖ ಕಾರಣವಾಯಿತು. ಈ ಘಟನೆಯಿಂದ ಬಂಡಾಯವೆದ್ದ ಸಿದ್ಧೋಜಿರಾವ್ ನಿಂಬಾಳಕರ್ ಅವರು ಮಹರಾಜರೊಂದಿಗೆ ಯುದ್ಧವನ್ನು ಮಾಡಿ ಏಸೂಬಾಯಿ ಎಂಬ ರಾಜಕುಮಾರಿಯನ್ನು ಬಲವಂತವಾಗಿ ಎತ್ತಿಕೊಂಡು ಹೋಗಿ ಮಡದಿಯನ್ನಾಗಿ ಮಾಡಿಕೊಂಡರು.[೮] ಇದರಿಂದಾಗಿ ಕೊಲ್ಹಾಪೂರದ ೨ನೆಯ ಛತ್ರಪತಿ ಶಿವಾಜಿಯವರಿಗೂ ಶ್ರೀ ಸಿದ್ಧೋಜಿರಾವ್ ನಿಂಬಾಳಕರ್ ದೇಸಾಯಿಯವರ ನಡುವೆ ಮನಸ್ತಾಪ ಉಂಟಾಯಿತು. ಕ್ರಿ.ಶ.೧೮೦೭ ಅಕ್ಟೋಬರ್‌ನಲ್ಲಿ ಕೊಲ್ಹಾಪೂರ ಛತ್ರಪತಿ ಶಿವಾಜಿಯವರ ಜೊತೆಗಿನ ಸಂಬಂಧ ಹದಗೆಟ್ಟಿತು. ಅದೇ ಸಂದರ್ಭದಲ್ಲಿ ಸಾವಂತವಾಡಿಯ ಲಕ್ಷ್ಮಿಬಾಯಿ ಭೋಸ್ಲೆ ಅವರು

೮. ಶ್ರೀ ಯಶವಂತರಾವ್ ಚವ್ಹಾಣ: “ನಿಪ್ಪಾಣಿ ದರ್ಶನ”, ಪು.೩೧.

ಕೋಲ್ಹಾಪೂರದ ಛತ್ರಪತಿ ಶಿವಾಜಿಯವರ ವಿರುದ್ಧ ಯುದ್ಧ ಮಾಡಿದರೆ ಸಹಾಯವನ್ನು ಮಾಡುವುದಾಗಿ ತಿಳಿಸಿದರು. ಜೊತೆಗೆ ಪುಣಾದ ೨ನೆಯ ಬಾಜೀರಾಯ್ ಅವರು ಸಹಾಯ ಮಾಡುವುದಾಗಿ ತಿಳಿಸಿದ್ದರಿಂದ ಅವರ ಸಹಾಯದಿಂದ ಕೊಲ್ಹಾಪೂರದ ಸಮೀಪದ ಟೆಂಬ್ಲಾಯ್ ಪ್ರದೇಶದಲ್ಲಿ ಹಾಗೂ ಸಾವ್‌ಗಾಂವ್ (ಸಾಗಾಂವ್) ಸಮೀಪ ಯುದ್ಧ ನಡೆದು, ಈ ಎರಡೂ ಯುದ್ಧಗಳನ್ನು ಗೆದ್ದುಕೊಂಡು ಚಿಕ್ಕೋಡಿ ಮತ್ತು ಮನೊಳ್ಳಿ ತಾಲೂಕುಗಳನ್ನು ತಮ್ಮ ವಶಕ್ಕೆ ತೆಗೆದುಕೊಂಡರು.

ಕ್ರಿ.ಶ.೧೮೦೮ರಲ್ಲಿ ಕೊಲ್ಹಾಪೂರದ ೨ನೆಯ ಛತ್ರಪತಿ ಶಿವಾಜಿಯವರು ಕುಪಿತಗೊಂಡಿದ್ದು. ಶ್ರೀ ಸಿದ್ಧೋಜಿರಾವ್ ನಿಂಬಾಳಕರ್ ಮೇಲೆ ಯುದ್ಧವನ್ನು ಸಾರಿದರು. ಇದರಿಂದ ಮತ್ತಷ್ಟು ರೊಚ್ಚಿಗೆದ್ದ ಸಿದ್ಧೋಜಿರಾವ್ ನಿಂಬಾಳಕರ್ ಅವರು ಅರಬಸ್ತಾನದ ಸೈನ್ಯದೊಂದಿಗೆ ಪುಣಾದ ಬಾಜೀರಾಯ್ ಅವರ ಸಹಾಯ ಪಡೆದು, ಸಾವಂತವಾಡಾದ ಲಕ್ಷ್ಮೀಬಾಯಿಯವರ ಸಹಕಾರದೊಂದಿಗೆ ಆಕ್ರಮಣಕಾರಿ ಯುದ್ಧವನ್ನೇ ಮಾಡಿದರು. ಇದರಿಂದಾಗಿ ಸುಮಾರು ೨೦೦೦ದಷ್ಟು ಸೈನಿಕರು ಮರಣ ಹೊಂದಿದರು. ೨,೫೦೦ ರಷ್ಟು ಜನ ಗಾಯಾಳುಗಳಾದರು. ಸುಮಾರು ೫೦೦ ಕುದುರೆಗಳು ಮರಣವನ್ನಪ್ಪಿದವು. ಈ ಯುದ್ಧದಲ್ಲಿ ಹಲವಾರು ಸರ್ದಾರ್‌ಗಳು ಮರಣ ಹೊಂದಿದರು. ಕೊಲ್ಹಾಪೂರದ ೨ನೆಯ ಛತ್ರಪತಿ ಶಿವಾಜಿ ಸೋತು ತಲೆತಪ್ಪಿಸಿಕೊಂಡರು. ಈ ದೊಡ್ಡದಾದ ಯುದ್ಧದಲ್ಲಿ ಸುತ್ತಮುತ್ತಲಿನ ಜಹಾಗೀರ್‌ದಾರರು, ಇನಾಮ್‌ದಾರರು, ಜನಸಾಮಾನ್ಯರು ಭಯಭೀತರಾದರು. ಈ ಯುದ್ಧದಲ್ಲಿ ಗೆದ್ದಿರುವ ಶ್ರೀ ಸಿದ್ಧೋಜಿರಾವ್ ನಿಂಬಾಳಕರ್ ದೇಸಾಯಿಯವರನ್ನು ಪುಣೆಯ ಬಾಜೀರಾವ್ ಪೇಶ್ವೆ ಅವರು ಕರೆಸಿಕೊಂಡು "ಸರ್ ಲಷ್ಕರ್ ಪ್ರಶಸ್ತಿ"ಯನ್ನು ಅವರಿಗೆ ಕೊಟ್ಟು, ೫,೪೧.೧೨೦ ರೂಪಾಯಿಗಳ ಬಹುಮಾನವನ್ನು ನೀಡಿ ಸನ್ಮಾನಿಸಿ ಬಿಳ್ಕೊಟ್ಟರು.

ಶ್ರೀ ಸಿದ್ಧೋಜಿರಾವ್ ನಿಂಬಾಳಕರ್ ದೇಸಾಯಿಯವರು ಬೆಳಗಾಂವ್, ಬಿಜಾಪೂರ, ಕೊಲ್ಹಾಪೂರ ಈ ಜಿಲ್ಲೆಗಳ ಕೆಲವು ಭಾಗಗಳನ್ನು ತನ್ನ ಆಧೀನಕ್ಕೆ ಒಳಪಡಿಸಿಕೊಂಡಿದ್ದು, ಇವರ ಮುಂದೆ ಸಣ್ಣಪುಟ್ಟ ಜಹಾಗೀರ್‌ಧಾರ್ ಮತ್ತು ಇನಾಮ್‌ಧಾರ್‌ರು ಇವರನ್ನು ಕಂಡು ಭಯಭೀತರಾಗಿ ಥರಥರ ನಡುಗುತ್ತಿದ್ದರು. ಹೀಗೆ ಶ್ರೀ ಸಿದ್ಧೋಜಿರಾವ್ ನಿಂಬಾಳಕರ್ ದೇಸಾಯಿಯವರು ಶೂರವೀರರಾಗಿದ್ದು ಶತೃಗಳಿಗೆ ಸಿಂಹಸ್ವಪ್ನರಾಗಿದ್ದರು. ಸಿದ್ದೋಜಿರಾವ್ ಅವರು ಆರು ಜನ ಮಡದಿಯರನ್ನು ಮಾಡಿಕೊಂಡಿದ್ದರು. ಇವರಿಗೆ ಗಂಡುಸಂತಾನವಿರಲಿಲ್ಲವಾದ್ದರಿಂದ ಸಹೋದರ ರಘುನಾಥರಾವ್ ಅವರ ಮಗನಾದ ಮುರಾರ್‌ರಾವ್ ಅವರನ್ನು ದತ್ತುಪುತ್ರನನ್ನಾಗಿ ಮಾಡಿಕೊಂಡರು. ತನ್ನ ಜಹಾಗೀರಿಯಲ್ಲಿ ೧.೮೩.೬೯೩-೦೦ ರೂಪಾಯಿಗಳ ವಾರ್ಷಿಕ ಸಂಪತ್ತಿಗೆ ಒಡೆಯನಾಗಿದ್ದು, ಇದರಲ್ಲಿ ತನ್ನ ಮೊದಲನೇ ಮಡದಿ ಅಹಲ್ಯಬಾಯಿಗೆ ೩,೦೦೦/- ರೂಪಾಯಿಗಳು ಮತ್ತು ಉಳಿದ ಐದು ಜನ ಮಡದಿಯರಿಗೆ ಪ್ರತ್ಯೇಕವಾಗಿ ವಾರ್ಷಿಕ ೨,೦೦೦/- ರೂಪಾಯಿಗಳನ್ನು ಕೊಡಬೇಕೆಂದು ವಿಲ್ ಮಾಡಿಸಿಟ್ಟಿದ್ದರು. ಸಿದ್ದೋಜಿರಾವ್ ನಿಂಬಾಳಕರ್ ಅವರ ಮರಣಾ ನಂತರ ವಿಲೇವಾರಿ ಮಾಡಲಾಯಿತು.

**ಸಿದ್ಧೋಜಿರಾವ್ ನಿಂಬಾಳಕರ್ ಅವರ ರಾಜ್ಯಾಡಳಿತದ ಅಂತಿಮ ದಿನಗಳು:**

ತಮ್ಮ ಜೀವನದುದ್ದಕ್ಕೂ ಸಂಘರ್ಷಮಯ ಜೀವನವನ್ನು ಸಾಗಿಸಿಕೊಂಡು ಬಂದ ಸಿದ್ಧೋಜಿರಾವ್ ನಿಂಬಾಳಕರ್ ದೇಸಾಯಿಯವರು ತಮ್ಮ ಕೊನೆಯ ದಿನಗಳಲ್ಲಿ ಅಂದರೆ ಕ್ರಿ.ಶ.೧೮೧೮ರಲ್ಲಿ ಮರಾಠಾ ರಾಜರೊಡಗೂಡಿ ಎರಡನೇ ಬಾರಿಗೆ ಯುದ್ಧಮಾಡುವ ಸಂದರ್ಭ ಬರುತ್ತದೆ. ಈ ಭಾರಿಯ ಯುದ್ಧದಲ್ಲಿ ಆಂಗ್ಲರನ್ನು ಎದುರಿಸಬೇಕಾಗಿತ್ತು. ಈ ನಿರ್ಣಾಯಕ ಯುದ್ಧದಲ್ಲಿ ಮರಾಠಾ ಮಹಾರಾಜ ಎರಡನೇ ಬಾಜೀರಾವ್‌ರೊಂದಿಗೆ ಸಿದ್ಧೋಜಿರಾವ್ ನಿಂಬಾಳಕರ್ ಅವರೂ ಬ್ರಿಟೀಷರ ವಿರುದ್ಧ ಸೋಲುಂಡರು. ಆಗ ಸಿದ್ಧೋಜಿರಾವ್ ನಿಂಬಾಳಕರ್ ದೇಸಾಯಿಯವರು ಬ್ರಿಟೀಷ್ ಈಸ್ಟ ಇಂಡಿಯಾ ಕಂಪನಿಯವರಿಗೆ ಶರಣಾಗತರಾಗುತ್ತಾರೆ. ಇದರಿಂದಾಗಿ ಕ್ರಿ.ಶ. ೧೮೨೦ ಜೂನ್ ೧೪ರಂದು ಹನ್ನೆರಡನೇ ಕಲಮ್ಮು ಜಾರಿಗೊಳಿಸಿದ ಬ್ರಿಟೀಷರು. ಈ ಆದೇಶದಂತೆ ಚಿಕ್ಕೋಡಿ, ಮುನ್ನೊಳ್ಳಿಯಂತಹ ಪ್ರಮುಖ ಪ್ರಾಂಥಗಳನ್ನು ಸಿದ್ಧೋಜಿರಾವ್ ನಿಂಬಾಳಕರ್ ಅವರು ಕಳೆದುಕೊಳ್ಳಬೇಕಾಯಿತು.

ಮುಂದಿನ ದಿನಗಳಲ್ಲಿ ಬ್ರಿಟೀಷರ ವಕ್ರದೃಷ್ಟಿಯು ಈ ರಾಜ್ಯಾಡಳಿತದ ಮೇಲೂ ಬಿದ್ದು, ಸಿದ್ಧೋಜಿರಾವ್ ನಿಂಬಾಳಕರ್ ಅವರ ಸೈನ್ಯ ಇಷ್ಟೇ ಇರಬೇಕೆಂದು ಸೀಮಿತಗೊಳಿಸಿ ಬ್ರಿಟೀಷ್ ಕಾಯ್ದೆ ಜಾರಿಗೊಳಿಸಿದರು. ಹೀಗೆ ಇವರಿಗಿರುವ ಅಧಿಕಾರ ಮತ್ತು ಪ್ರಭಾವಗಳೆರಡನ್ನೂ ಕಡಿಮೆಗೊಳಿಸುತ್ತಾ ಸಾಗಿದ ಬ್ರಿಟೀಷರ ನೀತಿಯಿಂದಾಗಿ ಸಿದ್ಧೋಜಿರಾವ್ ನಿಂಬಾಳಕರ್ ಅವರ ಆದೇಶಪಾಲಿಸುತ್ತಿದ್ದ ಸಣ್ಣಪುಟ್ಟ ಸರ್ದಾರರು, ಜಹಾಗಿರ್‌ದಾರರು ಇವರಿಂದ ದೂರವಾಗುತ್ತ ಬ್ರಿಟೀಷರ ಮರ್ಜಿಗೆ ಅನುಗುಣವಾಗಿ ನಡೆಯತೊಡಗಿದರು. ಒಂದು ಕಡೆ ಹಂತಹಂತವಾಗಿ ಅಧಿಕಾರವನ್ನು ಕಿತ್ತುಕೊಳ್ಳುತ್ತಿರುವ ಬ್ರಿಟೀಷರು ಇನ್ನೊಂದು ಕಡೆ ತಮ್ಮ ಸಹಾಯ ಸಹಕಾರದಿಂದಲೇ ಬೆಳೆದು ಬಂದ ಸಣ್ಣಪುಟ್ಟ ಸರ್ದಾರ್‌ರು ಈ ಸಂದೀಗ್ಧ ಪರಿಸ್ಥಿತಿಯಲ್ಲಿ ತಮ್ಮಿಂದ ದೂರವಾಗುತ್ತಿರುವುದು ಸಿದ್ಧೋಜಿರಾವ್ ನಿಂಬಾಳಕರ್ ಅವರಿಗೆ ನೋವುಂಟು ಮಾಡಿತು. ಈ ಎಲ್ಲ ರಾಜಕೀಯ ಬದಲಾವಣೆಗಳು ಒಂದೆಡೆ ಆದರೆ ಬ್ರಿಟೀಷರ ಕಿರುಕುಳ ಇನ್ನೊಂದೆಡೆ ಆಗಿ ಸಹಿಸಿಕೊಳ್ಳುವುದು ಕಷ್ಟವಾಯಿತು. ತಮ್ಮ ಅಂತಿಮ ದಿನಗಳಲ್ಲಿ ನಿಸ್ಸಾಹಾಯಕರಾದ ಸಿದ್ಧೋಜಿರಾವ್ ನಿಂಬಾಳಕರ್ ದೇಸಾಯಿಯವರು ಕ್ರಿ.ಶ.೧೮೩೯ ಜುಲೈ ೨೯ ರಂದು ಕೊನೆಯುಸಿರೆಳೆದರು.



**ನಿಪ್ಪಾಣಿ ಸಂಸ್ಥಾನದ ವಂಶಸ್ಥರು**[೯]

* ಪರ್ವತಗೌಡ ನಿಂಬಾಳಕರ್ ದೇಸಾಯಿ

* ಸಿದ್ದೋಜಿರಾವ್ ನಿಂಬಾಳಕರ್ ದೇಸಾಯಿ
(ಕ್ರಿ.ಶ.೧೭೭೪– ಕ್ರಿ.ಶ.೧೮೩೯)

* ಮುರಾರ್‌ರಾವ್ ಉರ್ಫ್ ಬಾಬಾಸಾಹೇಬರಾಜ್
(ಕ್ರಿ.ಶ.೧೮೩೯–೧೮೮೬)

* ಅಪ್ಪಾಸಾಹೇಬ ಉರ್ಫ್ ಸಿದ್ದೋಜಿರಾವ್-II
(ಕ್ರಿ.ಶ.೧೮೮೬–೧೯೨೧)

* ಮುರಾರ್‌ರಾವ್ ಉರ್ಫ್ ಜೀಜಾಜಿರಾವ್-II
(ಕ್ರಿ.ಶ.(೧೯೨೧–೧೯೩೯)

* ಅಂಬಾಜಿರಾವ್ ರಾಜೆ
(ಕ್ರಿ.ಶ.೧೯೩೯–೧೯೭೭)

* ಮುರಾರ್‌ರಾವ್ ಉರ್ಫ್ ದಾದಾರಾಜೆ I
(ಕ್ರಿ.ಶ.೧೯೭೭ ಅಗಷ್ಟ ೧೬ ರಿಂದ)

ಹೀಗೆ ಈ ನಿಪ್ಪಾಣಿ ಸಂಸ್ಥಾನದ ಆಡಳಿತವು ವಿಕೇಂದ್ರಿಕರಣಗೊಂಡು ಸಾಗುತ್ತ ಬಂದಿರುವುದು ತಿಳಿದು ಬರುತ್ತದೆ. ಕ್ರಿ.ಶ.೧೮೩೯ರ ನಂತರ ಬ್ರಿಟೀಷರ ಆಡಳಿತಕ್ಕೆ ಸಂಪೂರ್ಣವಾಗಿ ಒಳಗೊಂಡಿರುವುದರಿಂದ ಈ ಮನೆತನದ ವಾರಸುದಾರರಿಗೆ ಕನಿಷ್ಠ ಸೌಲಭ್ಯಗಳನ್ನು ಮಾತ್ರ ಒದಗಿಸಿದ್ದುದು ಕಂಡುಬರುತ್ತದೆ.

ಇಂದಿನವರೆಗೂ ಆ ಮನೆತನದವರು ಈ ವಾಡೆಯನ್ನು ಉಳಿಸಿಕೊಂಡು ಬಂದಿರುವರಾದರೂ ಸೂಕ್ತ ಸಂರಕ್ಷಣೆ ಇಲ್ಲದೇ ಐತಿಹಾಸಿಕವಾಗಿರುವ ವಾಡೆ ನಶಿಸುವ ಎಲ್ಲ ಸೂಚನೆಗಳನ್ನು ನೀಡುತ್ತಿದ್ದರೂ. ಅಸಹಾಯಕರಾಗಿರುವ ವಂಶಸ್ಥರು ನಿರ್ಲಕ್ಷ ತೋರಿರುವ ಸರಕಾರ ಇತ್ತರ ಗಮನ ಹರಿಸಿ ಸಂರಕ್ಷಿಸುವುದು ನಾಡಿನ ಸಾಂಸ್ಕೃತಿಕ ದೃಷ್ಟಿಯಿಂದ ಅತ್ಯವಶ್ಯಕವಾಗಿದೆ.

v v v

೯. ಶ್ರೀ ಜಗದೀಶ ಖೋತ್: "ನಿಪ್ಪಾಣಿ ಭಿತ್ತಿ ಚಿತ್ರಕಲೆ", (ಡಿಪ್ಲೋಮಾ ಯೋಜನಾ ವರದಿ–೨೦೦೬) ಪು.೧೪.

# ನಿಪ್ಪಾಣಿ ವಾಡೆ ಭಿತ್ತಿ ಚಿತ್ರಗಳಿರುವನೆಲೆ



ನಿಪ್ಪಾಣಿ ನಗರ ಹಾಗೂ ರಾಜವಾಡೆಯ ನಿರ್ಮಾತೃ



ಶ್ರೀ ಸಿದ್ದೋಜೀರಾವ್ ನಿಂಬಾಳಕರ್ ದೇಸಾಯಿ

# ಶ್ರೀ ಸಿದ್ಧೋಜೀರಾವ್ ನಿಂಬಾಳಕರ್ ರಾಜವಾಡೆ



ನಿಪ್ಪಾಣಿ ವಾಡೆ ಹೆಬ್ಬಾಗಿಲು



ನಿಪ್ಪಾಣಿ ವಾಡೆ ದ್ವಾರ ಬಾಗಿಲು

# ಶ್ರೀ ಸಿದ್ದೋಜೀರಾವ್ ನಿಂಬಾಳಕರ್ ರಾಜವಾಡೆ



ದರ್ಭಾರ್ ಹಾಲ್



ನಿಂಬಾಳಕರ್ ವಾಡೆ ಮುಂಬಾಗ

ಅಧ್ಯಾಯ : ಮೂರು

# ನಿಷ್ಪಾಣಿವಾಡೆ ಭಿತ್ತಿ ಚಿತ್ರಕಲೆಯ ಸ್ವರೂಪ

*ಭಿತ್ತಿ ಇಲ್ಲದೇ ಬರೆಯಬಹುದೇ ಚಿತ್ತಾರವ*
*ಭಿತ್ತಿಯೊಂದಿಲ್ಲದಿರೆ ಚಿತ್ರವೆಂತಿರಲಹುದು*
*ಚಿತ್ರವಿಲ್ಲದೇ ಭಿತ್ತಿ ಸೊಗಸಹುದೆಂತು*
*ದಿನೇಶ್ವರಸುತನ ರೂಪವು ಚಿತ್ರಂ ಬರೆದಂತಿರ್ಪುದು*
*ಚಿತ್ರ ಭಿತ್ತಿಯೊಳೆನ್ನಾ*

ಹೀಗೆ ವಚನ ಸಾಹಿತ್ಯದಲ್ಲಿ ಶರಣರು ಭಿತ್ತಿ ಚಿತ್ರಗಳ ಕುರಿತು ಅಂದರೆ ಭಿತ್ತಿ ಮತ್ತು ಭಿತ್ತಿಚಿತ್ರಗಳ ಕುರಿತು ಪ್ರಾಸಂಗಿಕವಾಗಿ ಹೀಗೆ ವಿವರಿಸಿರುವುದನ್ನು ಕಾಣಬಹುದಾಗಿದೆ.[೧] ಭಿತ್ತಿ ಎಂದರೆ ಚಿತ್ರವನ್ನು ಬರೆಯುವ ಮೂಲಧಾರವೆಂದೂ ಭಿತ್ತಿ ಚಿತ್ರವೆಂದರೆ ಬರೀ ಗೋಡೆಯ ಮೇಲೆ ರಚಿಸಿದ ಚಿತ್ರಗಳಲ್ಲದೇ ಯಾವುದೇ ಆಧಾರದ ಮೇಲೆ ರಚಿಸಿದ ಚಿತ್ರಗಳೂ ಭಿತ್ತಿಚಿತ್ರಗಳೆನಿಸುತ್ತವೆ. ಭಿತ್ತಿ ಇಲ್ಲದೇ ಬರೆಯಬಹುದೇ ಚಿತ್ತಾರವ? ಭಿತ್ತಿಯೊಂದಿಲ್ಲದಿರೆ ಚಿತ್ರವೆಂತಿರಲಹುದು? ಎನ್ನುವ ಶರಣರ ವಚನದಲ್ಲಿ ಚಿತ್ರ ಬರೆಯಲು ಭಿತ್ತಿಯ ಅವಶ್ಯಕತೆಯನ್ನು ತಿಳಿಸಿಕೊಡುತ್ತದೆ.

ಭಿತ್ತಿ ಚಿತ್ರಕಲೆ ಎಂದರೆ ಸ್ವಭಾವಿಕ ಗುಹೆ, ಶಿಲೆ, ಬಯಲು ಬಂಡೆಗಳ ಮೇಲೆ ಮತ್ತು ಮಾನವ ನಿರ್ಮಿತವಾದ ಗುಹೆ, ದೇವಾಲಯ, ಮನೆ, ಮಠ, ಮಸೀದಿ, ಚರ್ಚುಗಳ ಮುಂತಾದ ಕಟ್ಟಡಗಳ ಗೋಡೆ, ಮೇಲ್ಛಾವಣಿ, ಜಂತಿ, ತೊಲೆ ಕಂಬ, ಮಾಡುಗಳು, ಕಿಟಕಿಗಳು, ಕಮಾನುಗಳು ಹೀಗೆ ವಸ್ತುವಿನ ಯಾವುದೇ ಭಾಗದಲ್ಲಿ ಚಿತ್ರರಚಿಸಿ ಅವುಗಳನ್ನು ಅಲಂಕರಿಸುವ ವಿಧಾನವನ್ನು ಭಿತ್ತಿಚಿತ್ರಕಲೆ ಎಂದು ಪರಿಗಣಿಸಲಾಗುವುದು. ಭಿತ್ತಿಚಿತ್ರಕಲೆಯ ಪ್ರಾಚೀನತೆಯ ಕುರಿತು ನಿಖರವಾದ ಕಾಲಸೂಚಿ ಹೇಳುವುದು

೧. ಡಾ.ಪಿ.ವ್ಹಿ.ನಾರಾಯಣ: "ವಚನ ಸಾಹಿತ್ಯ-ಒಂದು ಅಧ್ಯಯನ", ಪು.೩೨೯.

ಅಸಾಧ್ಯವಾದುದಾದರೂ ಮಾನವ ಪ್ರಪಂಚಕ್ಕೆ ಕಾಲಿಟ್ಟನಂತರ ನಿತ್ಯದ ಬದುಕಿಗೆ ಬೇಕಾಗುವ ಹಾಗೂ ಅವನ ಭಾವನೆಗಳನ್ನು ವ್ಯಕ್ತಪಡಿಸಲು ಚಿತ್ರಗಳನ್ನು ಮಾಧ್ಯಮವಾಗಿ ಯಾವಾಗ ಬಳಸಿಕೊಂಡನೋ ಆವಾಗಿನಿಂದಲೇ ಈ ಕಲೆಯ ಕಾಲವೆಂದು ಗುರುತಿಸಬೇಕಾಗುತ್ತದೆ. ಯಾಕೆಂದರೆ "ಕಲೆಯು ದಿಢೀರನೇ ಹುಟ್ಟಿ ಬರಲಿಲ್ಲ ಪ್ರಾಚೀನ ವರ್ಣಚಿತ್ರಗಳನ್ನು ಮೂಲಾಧಾರಗಳಿಗೆ (ವಸ್ತುವಿನ, ಗುಹೆ, ಇತ್ಯಾದಿ) ಅಂಟಿದ ಬಣ್ಣವನ್ನೋ ಅದರ ಕಲ್ಲನ್ನೋ, ಮಣ್ಣನ್ನೋ ಪರೀಕ್ಷೆಗೆ ಒಳಪಡಿಸಿ ಕಾಲಗಣನೆ ಮಾಡಬೇಕಾಗುತ್ತದೆ."[೨] ಎಂಬ ವಿಚಾರಗಳು ಹೆಚ್ಚು ಅರ್ಥಪೂರ್ಣವಾದವುಗಳಾಗಿವೆ.

ಶಿಲಾಯುಗದ ಕಾಲದಲ್ಲಿಯೂ ಮಾನವನ ಭಿತ್ತಿಚಿತ್ರಕಲಾ ನಿದರ್ಶನಗಳು ಕಂಡುಬರುತ್ತವೆ. ಈ ಕಾಲದ ಮಾನವನು ವರ್ಣದ್ರವ್ಯಗಳ ಬಗ್ಗೆ, ವರ್ಣಗಳ ತಯಾರಿಕೆ ಅಂಟುಮಾಧ್ಯಮ ವರ್ಣಗಳನ್ನು ಕುಟ್ಟಿಪುಡಿ ಮಾಡುವುದು, ವರ್ಣಗಟ್ಟಿಗಳನ್ನು ಅರೆಯುವದು. ಅವುಗಳನ್ನು ದ್ರಾವಣವಾಗಿ ಮಾಡಿಕೊಳ್ಳುವುದು, ಕುಂಚಗಳ ಉಪಯೋಗ ಮುಂತಾದ ತಾಂತ್ರಿಕತೆಗಳನ್ನು ಅಗಲೇ ಬಲ್ಲವನಾಗಿದ್ದನು ಎಂದು ವಿದ್ವಾಂಸರು ಅಭಿಪ್ರಾಯ ಪಟ್ಟಿದ್ದಾರೆ.[೩] ಈ ಹಿನ್ನೆಲೆಯಲ್ಲಿ ಮಾನವನು ಬೆಟ್ಟಗುಡ್ಡಗಳಲ್ಲಿನ ಗುಹೆಗಳು ಶಿಲಾಶ್ರಯತಾಣಗಳಲ್ಲಿ ವಾಸಿಸುತ್ತಿದ್ದ ಸಂದರ್ಭದಲ್ಲಿ ರಚನೆಯಾದ ಚಿತ್ರಗಳು ಇವಾದರೆ ಮುಂದೆ ವ್ಯವಸಾಯಕ್ಕೆ ಯೋಗ್ಯವಾದ ಬಯಲು ಪ್ರದೇಶಕ್ಕೆ ಬಂದು ನೆಲೆಸಿದ ನಂತರ ಅತ ರಚಿಸುತಿದ್ದ ಭಿತ್ತಿ ಚಿತ್ರಕಲೆಯ ಸ್ವರೂಪವೂ ಬದಲಾಯಿತು. ಈ ಹೊತ್ತಿಗೆ ಭಿತ್ತಿಚಿತ್ರರಚನೆಯಲ್ಲಿ ನೀತಿ, ನಿಯಮಗಳು, ಕಟ್ಟು ಪಾಡುಗಳು, ಪ್ರಮಾಣಗಳು, ಚಿತ್ರರಚನೆಯಲ್ಲಿ ಕಂಡು ಬರತೊಡಗಿದವು ಚಿತ್ರಗಳನ್ನು ಹೇಗೆ ಬರೆಯಬೇಕೆಂಬ ಶಾಸ್ತ್ರೀಯ ವಿಧಾನಗಳು ರೂಪತಾಳಿದವು. ಇಂತಹ ಚಿತ್ರಗಳನ್ನು ಮಾನವ ತಾನು ನಿರ್ಮಿಸಿದ ವಾಸ್ತು ರಚನೆಯಲ್ಲಿ ಕಂಡುಬರತೊಡಗಿದವು. ಹಿಂದೆ ತಾನು ವಾಸಿಸುವ ನೆಲೆಗಳಾದ ಶಿಲಾಶ್ರಯತಾಣಗಳು ಶಿಲಾಗುಹೆಗಳನ್ನು ವರ್ಣಚಿತ್ರಗಳಿಂದ ಅಲಂಕರಿಸಿದಂತೆ ಬಯಲು ಪ್ರದೇಶದಲ್ಲಿ ನೆಲಸಿದ ಮಾನವನೂ ತನ್ನ ನಿವಾಸ, ಅರಮನೆ, (ಮಠ) ಗುರುಮನೆ, ದೇವಾಲಯ, ಸಾರ್ವಜನಿಕ ಭವನಗಳು ಮತ್ತು ಸಮಾಧಿ, ಮಸೀದಿ, ಚರ್ಚುಘಳು ಮುಂತಾದ ಸ್ಥಳಗಳನ್ನು ವರ್ಣಚಿತ್ರಗಳಿಂದ ಅಲಂಕರಿಸುತ್ತಿದ್ದನೆಂದು ಅನೇಕ ಪುರಾವೆಗಳು ದೊರೆಯುತ್ತಿವೆ.[೪]

ಭಾರತದಲ್ಲಿ ಭಿತ್ತಿಚಿತ್ರಕಲೆ ಅತ್ಯಂತ ಪುರಾತನ ಕಾಲದಿಂದಲೇ ಕಂಡುಬರುತ್ತಿದ್ದು, ಮಧ್ಯಪ್ರದೇಶದ ಭಿಂಬೆಟ್ಕಾ ಪ್ರದೇಶದಲ್ಲಿ ಕ್ರಿ.ಪೂ.೨,೫೦೦೦ ವರ್ಷಗಳಷ್ಟು ಪುರಾತನವಾದ ಪ್ರಾಗೈತಿಹಾಸಿಕ ಭಿತ್ತಿಚಿತ್ರಗಳಿವೆ,[೫]

---

೨. ಡಾ.ಎಸ್.ಸಿ.ಪಾಟೀಲ: "ಜನಪದ ಚಿತ್ರಕಲೆ", ಪು.೨೭.

೩. ಶ್ರೀ ಎಸ್.ಕೆ.ಪಾಂಡೆ: "ಇಂಡಿಯನ್ ರಾಕ್ ಆರ್ಟ", ಪು.೧೯೯.

೪. ಶ್ರೀ ಬಿ.ವಿ.ಕೆ. ಶಾಸ್ತ್ರೀ: "ರೇಖಾಚಿತ್ರ", ಪು.೪.

೫. ಡಾ.ಯಾದಪ್ಪ ಪರದೇಶಿ: ಉತ್ತರ ಕರ್ನಾಟಕದ ಭಿತ್ತಿ ಚಿತ್ರಕಲೆ, ಪು.೨೮.

ಮಧ್ಯಪ್ರದೇಶದ ಮೂರೇನಾ ಜಿಲ್ಲೆಯ ಪಹಾರ್‌ಘರ ಎಂಬಲ್ಲಿನ ಶಿಲಾಶ್ರಯಗಳಲ್ಲಿ ಸುಮಾರು ಕ್ರಿ.ಪೂ.೨೩,೦೦೦ ವರ್ಷಗಳಷ್ಟು ಹಿಂದಿನ ಪ್ರಾಗೈತಿಹಾಸಿಕ ಭಿತ್ತಿಚಿತ್ರಗಳು ಕಂಡುಬಂದಿವೆ. ಮಧ್ಯಪ್ರದೇಶದಲ್ಲಿರುವ ಮಹದೇವ್‌ಬೆಟ್ಟ, ರಾಮಘಡ ಬೆಟ್ಟ ಜೋಗಿ ಮೂರಾ ಗುಹೆಗಳಲ್ಲಿ ಕಂಡು ಬಂದ ಪ್ರಾಗೈತಿಹಾಸಿಕ ಭಿತ್ತಿಚಿತ್ರಗಳು ಕ್ರಿ.ಪೂ.೧೦.೦೦೦, ವರ್ಷಗಳಷ್ಟು ಹಿಂದಿನವುಗಳಾಗಿವೆ. ಸುಮಾರು ಕ್ರಿ.ಪೂ.೫೦೦೦ ವರ್ಷಗಳಷ್ಟು ಹಿಂದಿನ ಸಿಂಧೂ ನಾಗರಿಕತೆಯ ಕಾಲದಲ್ಲಿ ಹರಪ್ಪಾ ಮೋಹೆಂಜೋದಾರೋದಲ್ಲಿನ ವಸ್ತುಗಳನ್ನು ಭಿತ್ತಿಚಿತ್ರಗಳಿಂದ ಅಲಂಕರಿಸುತ್ತಿದ್ದರು. ಟಿಬೇಟಿನಲ್ಲಿ ಕ್ರಿ.ಶ.೭ನೇ ಶತಮಾನದಲ್ಲಿ ಜೀವಿಸಿದ್ದ "ತಾರಾನಾಥನೆಂಬ" ಚರಿತ್ರಕಾರನು ಭಾರತದ ಬೌದ್ಧ ಚಿತ್ರಕಲೆಯ ಬಗ್ಗೆ ಪ್ರಸ್ತಾಪಿಸುತ್ತ ಕ್ರಿ.ಶ.ಪೂ. ೪೮೦ರಲ್ಲಿಯೇ ಭಿತ್ತಿಚಿತ್ರಕಲೆ ಉನ್ನತಾವಸ್ಥೆಯನ್ನು ಮುಟ್ಟಿತು ಎಂದು ಹೇಳುತ್ತಾನೆ.[೬] ರಾಮಾಯಣ, ಮಹಾಭಾರತಕಾಲದಲ್ಲಿ ಅರಮನೆಗಳನ್ನು ಭಿತ್ತಿಚಿತ್ರಗಳಿಂದ ಅಲಂಕರಿಸುತ್ತಿದ್ದರೆಂದೂ ತಿಳಿದು ಬರುತ್ತದೆ. ಮಹಾಭಾರತದ ಪೂರ್ವದಲ್ಲಿ ಬದುಕಿದ್ದ "ಆಪಸ್ತಂಭನೆಂಬ" ಋಷಿವರ್ಯನು ತನ್ನ "ಕರ್ಮಬುದ್ಧಿ ಸಾರ" ಎಂಬ ಗ್ರಂಥದಲ್ಲಿ ಚಿತ್ರಕಲೆಯ ಬಗ್ಗೆ ಪ್ರಸ್ತಾಪಿಸಿರುವುದನ್ನು ವಿದ್ವಾಂಸರು ಗುರುತಿಸಿದ್ದಾರೆ.[೭] ಚಿತ್ರಕಲೆಯ ಕುರಿತಾದ ಪ್ರಾಚೀನ ಗ್ರಂಥವೆಂದು ಹೇಳಲಾಗುವ "ಚಿತ್ರಸೂತ್ರವು" ಕ್ರಿ.ಪೂ.೪ನೇ ಶತಮಾನಕ್ಕಿಂತ ಮೊದಲೇ ರಚನೆಯಾಗದ್ದು ಇದರಲ್ಲಿ ಭಿತ್ತಿಚಿತ್ರಕಲೆಯ ವಿವರಗಳಿವೆ. ಮೌರ್ಯರ ಕಾಲದಲ್ಲಿ ಚಂದ್ರಗುಪ್ತನ ಮಂತ್ರಿ ಕೌಟಿಲ್ಯನ ಅರ್ಥಶಾಸ್ತ್ರದಲ್ಲಿ ಚಿತ್ರಕಲೆಯ ಉಲ್ಲೇಖವಿದೆ. ಬೌದ್ಧ ತ್ರಿಪೀಠಕಗಳಲ್ಲಿಯೂ ಚಿತ್ರಗೃಹಗಳ, ಚಿತ್ರಶಾಲೆಗಳ ಪ್ರಸ್ತಾಪ ಬರುತ್ತದೆ. ಕ್ರಿ.ಪೂ.೩ನೇ ಶತಮಾನದಲ್ಲಿ ರಚನೆಯಾದ "ಕಲ್ಲವಗ್ಗ" ಗ್ರಂಥದಲ್ಲಿ ಭಿತ್ತಿಚಿತ್ರಕಲೆಯ ವಿವರಗಳಿವೆ.

ಕರ್ನಾಟಕದಲ್ಲಿ ಅತ್ಯಂತ ಪುರಾತನ ಭಿತ್ತಿಚಿತ್ರಗಳು ಬದಾಮಿ ಬಳಿ ಇರುವ ಅರೆಗುಡ್ಡ, ಹಿರೇಗುಡ್ಡ, ಸೀತಿಮನಿ, ಸಿಡ್ಲಫಡಿಯಲ್ಲಿ ಹಾಗೂ ರಾಮದುರ್ಗದ ಮೇಗುಂಡೇಶ್ವರ ದೇವಾಲಯದ ಹತ್ತಿರ ಖಾಜೀಗುಡ್ಡದಲ್ಲಿ ದೇವಾಲಯದ ಹತ್ತಿರ ಖಾಜೀಗುಡ್ಡದಲ್ಲಿ ಪೂರ್ವಶಿಲಾಯುಗ ಅಂದರೆ ಕ್ರಿ.ಪೂ.೪೦,೦೦೦ ವರ್ಷಗಳ ಅವಧಿಯಲ್ಲಿ ರಚನೆಗೊಂಡಿದೆ ಎಂದು ಡಾ.ಅ.ಸುಂದರ ಇತಿಹಾಸ ತಜ್ಞರು ಅಭಿಪ್ರಾಯ ಪಡುತ್ತಾರೆ. ಹೀಗೆ ಉತ್ತರ ಕರ್ನಾಟಕದ ಬಿಜಾಪೂರ, ಬಳ್ಳಾರಿ, ರಾಯಚೂರು ಜಿಲ್ಲೆಗಳಲ್ಲಿಯ ಹಲವಾರು ಕಡೆ ಇಂತಹ ಪ್ರಾಗೈತಿಹಾಸಿಕ ಭಿತ್ತಿಚಿತ್ರಗಳು ಉತ್ತರ ಕರ್ನಾಟಕದಲ್ಲಿ ಕಂಡುಬಂದರೆ ಶಿಷ್ಠ ಪರಂಪರೆಯ ಭಿತ್ತಿಚಿತ್ರಗಳ ಬೆಳವಣಿಗೆಯನ್ನೂ ಸಾಮಾನ್ಯವಾಗಿ ಚಾಲುಕ್ಯರ ಭಿತ್ತಿಚಿತ್ರಗಳು ಕ್ರಿ.ಶ.೭ ಮತ್ತು ೮ನೆಯ ಶತಮಾನದಲ್ಲಿ ರಚನೆಗೊಂಡರೆ ೮ ರಿಂದ ೧೦ ನೇ ಶತಮಾನದಲ್ಲಿ ರಾಷ್ಟ್ರಕೂಟರು ತಮ್ಮ ಕಾಲದಲ್ಲಿ ಭಿತ್ತಿಚಿತ್ರಗಳನ್ನು ಎಲ್ಲೋರಾದಲ್ಲಿ ರಚನೆ ಮಾಡಿರುವುದು ಕಂಡುಬರುತ್ತದೆ.[೮] ಕ್ರಿ.ಶ. ೯೪೦ರ ಸುಮಾರಿನಲ್ಲಿ

೬. ಶ್ರೀ ಪಿ.ಆರ್.ತಿಪ್ಪೇಸ್ವಾಮಿ: "ಅವಲೋಕನ", ಪು.೩೨೮.

೭. ಡಾ.ಶಿವರಾಮ ಕಾರಂತರು: "ಭಾರತೀಯ ಚಿತ್ರಕಲೆ", ಪು.೩೨.

೮. ಶ್ರೀ.ಪಿ.ಆರ್.ತಿಪ್ಪೇಸ್ವಾಮಿ: "ಚಿತ್ರಕಲಾ ಪ್ರಪಂಚ", ಪು.೭೪.

ಪಂಪನು ಬರೆದ "ವಿಕ್ರಮಾರ್ಜುನ ವಿಜಯ" ದಲ್ಲಿ ಚಿತ್ರದ ವರ್ಣಕ್ರಮ, ಚಿತ್ರದ ಪಳ, ಮಾಸಿದ ಚಿತ್ರಗಳ ಪ್ರಸ್ತಾಪವಲ್ಲದೇ ಸಮಾನ ತಳದಲ್ಲಿ ಉಬ್ಬು-ತಗ್ಗುಗಳನ್ನು ತೋರುವ ಚಿತ್ರಕಾರನ ನೈಪುಣ್ಯದ ಬಗ್ಗೆ ಹೇಳಿರುವನು. "ಆದಿ ಪುರಾಣ"ದಲ್ಲಿ ಚಿತ್ರಪಟ, ಚಿತ್ರದ ರಸಭಾವ ರೇಖೆ, ವರ್ಣಕ್ರಮ, ಚಿತ್ರದ ಆಯಾಮಗಳು, ಚಿತ್ರಶಾಲೆ, ಚಿತ್ರಕಲಾವಿದ್ಯ ಮುಂತಾದ ವಿಷಯಗಳ ಬಗ್ಗೆ ಹೇಳಲಾಗಿದೆ. ಕ್ರಿ.ಶ.೯೫೦ರಲ್ಲಿ ರಾಷ್ಟ್ರಕೂಟರ ಚಕ್ರವರ್ತಿ ಮೂರನೇ ಕೃಷ್ಣನ ಆಸ್ಥಾನದಲ್ಲಿದ್ದ "ಪೊನ್ನ" ಕವಿಯು ಬರೆದ "ಶಾಂತಿಪುರಾಣ"ದಲ್ಲಿ ಭಿತ್ತಿಚಿತ್ರಕಲೆಯ ಉಲ್ಲೇಖ ಬರುತ್ತದೆ. ಗೃಹಾಂಗಗಳಲ್ಲಿ ಚಿತ್ರಶಾಲೆಯೂ ಒಂದು ಎಂದು ಹೇಳುತ್ತ ಭಿತ್ತಿಚಿತ್ರದ ವಿವರಣೆ ಚೀರಘಟ್ಟಿ ಮತ್ತು ವಿಶ್ವಕರ್ಮರೆಂಬ ಚಿತ್ರಕಲಾವಿದರ ಬಗೆಗೂ ಪಂಚವಿಧವರ್ಣ ಇತ್ಯಾದಿಗಳ ಕುರಿತು ಪೊನ್ನಕವಿ ಪ್ರಸ್ತಾಪಿಸಿರುವನು, ಕ್ರಿ.ಶ.೧೧೨೭ರಿಂದ ೧೧೩೯ರಲ್ಲಿ ಕಲ್ಯಾಣ ಚಾಲುಕ್ಯರ ದೊರೆ ಮೂರನೇ ಸೋಮೇಶ್ವರನು "ಮಾನಸೋಲ್ಲಾಸ" ಎಂಬ ಕೃತಿ ರಚಿಸಿದ್ದು, ಇದರಲ್ಲಿ ಭಿತ್ತಿ ಚಿತ್ರರಚನೆಯ ವಿಧಿವಿಧಾನಗಳು ಬಣ್ಣಗಳ ಕುರಿತು, ಕುಂಚಗಳ ಕುರಿತು ಹೀಗೆ ಭಿತ್ತಿಚಿತ್ರಗಳ ರಚನೆಯ ಕುರಿತು ಹೇರಳವಾದ ಮಾಹಿತಿ ದೊರೆಯುತ್ತದೆ ೧೧ನೆಯ ಶತಮಾನದ ಪ್ರಾರಂಭದಲ್ಲಿ ನಯಸೇನನ "ಧರ್ಮಾಮೃತ" ಕೃತಿಯಲ್ಲಿ ಭಿತ್ತಿಚಿತ್ರಗಳ ಹಾಗೂ ಪಟಚಿತ್ರಗಳ ಕುರಿತು ಹೇಳುತ್ತಾನೆ. ೧೨ನೆಯ ಶತಮಾನದಲ್ಲಿ ಹೊಯ್ಸಳ ದೊರೆ ಒಂದನೇ ಬಲ್ಲಾಳನ ಆಸ್ಥಾನ ಕವಿ ನಾಗಚಂದ್ರನು ರಚಿಸಿದ "ರಾಮಚಂದ್ರ ಚರಿತ ಪುರಾಣ"ದ ಪೀಠಿಕಾ ಪ್ರಕರಣದಲ್ಲಿ ಪುರವನಿತೆಯರು ಮಾಡುತ್ತಿದ್ದ ಚಿತ್ರರಚನೆ ಸಪ್ತಧಾತುಗಳಿಂದ ಸಿದ್ದಪಡಿಸಿಕೊಂಡ ವರ್ಣಕ್ರಮ, ಚಿತ್ರಬರೆಯುವ ಭಿತ್ತಿ, ನಿರ್ವಾಣರೇಖೆ ಮುಂತಾದವುಗಳ ಕುರಿತು ಹೇಳಲಾಗಿದ್ದು, "ಮಲ್ಲಿನಾಥ ಪುರಾಣ"ದ ೫ನೇ ಅಧ್ಯಾಯದಲ್ಲಿ ೨೭ ರಿಂದ ೪೦ರವರೆಗಿನ ಪದ್ಯಗಳ ವಿವರಣೆಯಲ್ಲಿ ಚಿತ್ರರಚನೆ, ರಚನಾ ಕೌಶಲ, ಚಿತ್ರಪ್ರಕಾರ, ವರ್ಣಕ್ರಮಾದಿಗಳ ವಿವರಗಳಿವೆ. ಕ್ರಿ.ಶ.೧೧೭೩ ರಿಂದ ೧೨೨೦ರ ಆವಧಿಯಲ್ಲಿ ಎರಡನೇ ವೀರ ಬಲ್ಲಾಳನ ಆಸ್ಥಾನದ್ಲಲಿದ್ದ ಜೈನಕವಿಗಳಾದ ನೇಮಿಚಂದ್ರನ "ನೇಮಿನಾಥ ಪುರಾಣ"ದ ಎರಡನೆಯ ಅಧ್ಯಾಯದಲ್ಲಿ ಹಾಗೂ ಜನ್ನನ "ಯಶೋಧರ ಚರಿತೆ"ಯ ನಾಲ್ಕನೇ ಅಧ್ಯಾಯ ಮತ್ತು ಅನಂತನಾಥ ಪುರಾಣದ ಒಂದನೇ ಅಧ್ಯಾಯಗಳಲ್ಲಿ ಭಿತ್ತಿ ಹಾಗೂ ಪಟಗಳಲ್ಲಿನ ಚಿತ್ರಗಳು ಧೂಳಿಚಿತ್ರ, ರಸಚಿತ್ರ, ಚಿತ್ರಶಾಲೆಗಳ ಕುರಿತು ಹೇಳಲಾಗಿದೆ. ಹೀಗೆ ಸಾಹಿತ್ಯಗಳಲ್ಲಿ ಭಿತ್ತಿಚಿತ್ರಗಳ ಕುರಿತು ಸಾಕಷ್ಟು ವಿವರಗಳು ನಮಗೆ ದೊರೆಯುತ್ತದೆ. ಈ ಕುರಿತು ಡಾ.ಯಾದಪ್ಪ ಪರದೇಶಿಯವರು[೯] ತಮ್ಮ "ಉತ್ತರಕರ್ನಾಟಕದ ಭಿತ್ತಿಚಿತ್ರಕಲೆ"ಯಲ್ಲಿ ಸುವಿವರವಾದ ಮಾಹಿತಿಯನ್ನೇ ನೀಡಿದ್ದಾರೆ.

---

೯. ಡಾ.ಯಾದಪ್ಪ ಪರದೇಶಿ: ಉತ್ತರಕರ್ನಾಟಕದ ಭಿತ್ತಿ ಚಿತ್ರಗಳು, ಪು.೪೭.

ಭಾರತದಲ್ಲಿ ಚಿತ್ರಕಲಾ ಇತಿಹಾಸವನ್ನು ಸಾಮಾನ್ಯವಾಗಿ ಅಜಂತಾ ಭಿತ್ತಿಚಿತ್ರಕಲೆಯಿಂದಲೇ (ಶಿಷ್ಟಪದ ಚಿತ್ರಗಳ) ಪ್ರಾರಂಭಿಸುವೆವು. ಕ್ರಿ.ಪೂ.೨ ನೆಯ ಶತಮಾನದಿಂದ ಕ್ರಿ.ಶ.೭ನೆಯ ಶತಮಾನದವರೆಗೆ ಅಂದರೆ ೮೦೦ ವರ್ಷಗಳ ಕಾಲ ಅಜಂತಾದ ಭಿತ್ತಿಚಿತ್ರಗಳು ರಚನೆಗೊಂಡಿದ್ದು, ಈ ಗವಿಗಳು ಭಾರತೀಯ ಚಿತ್ರಕಲೆಯ ದೊಡ್ಡಪ್ರದರ್ಶನಾಲಯಗಳಾಗಿವೆ. ಇಲ್ಲಿಯ ಚಿತ್ರಗಳು ರಾಜಕೀಯ ಸಾಮಾಜಿಕ ಅಂಶಗಳೊಂದಿಗೆ ಅಧ್ಯಾತ್ಮಿಕ ಗುಣಗಳನ್ನು ಹೊಂದಿರುವ ಬುದ್ಧನ ಜಾತಕ ಮತ್ತು ಜೀವನಕ್ಕೆ ಸಂಬಂಧಿಸಿದವುಗಳಾಗಿವೆ. ಕರ್ನಾಟಕದಲ್ಲಿ ಚಿತ್ರಕಲೆಗೆ ಮೊದಲಿನಿಂದಲೂ ಪೋಷಣೆ ದೊರೆತಿದೆ. ಅಜಂತಾದ ಭಿತ್ತಿಚಿತ್ರಗಳ ರಚನೆಯಲ್ಲಿ ಕನ್ನಡಿಗರ ಪಾತ್ರವಿದ್ದಿರುವುದನ್ನು ಕಾಣುತ್ತೇವೆ.[೧೦] ಅಜಂತೆಯ ಒಂದನೇ ಗುಹೆಯಲ್ಲಿ ಚಿತ್ರರಚನೆ ಮಾಡಿದ್ದು ಕರ್ನಾಟಕ ಪರಂಪರೆಯ ಒಂದು ಘಟ್ಟವನ್ನು ಇಲ್ಲಿ ಕಾಣುವುದು ಗಮನಾರ್ಹವಾಗಿದೆ.ಅಂತೆಯೇ ಅಜಂತಾದ ಪರಂಪರೆಯು ವಿಕಾಸಹೊಂದುತ್ತ ಬದಾಮಿ ಹಾಗೂ ಎಲ್ಲೋರಾಗಳಲ್ಲಿಯೂ ಮುಂದುವರೆಯಿತು. ರಾಷ್ಟ್ರಕೂಟರ ಕಾಲದಲ್ಲಿ ರಚನೆ ಆದ ಎಲ್ಲೋರಾದ ಭಿತ್ತಿಚಿತ್ರಗಳ ಪ್ರಭಾವವು ಮುಂದೆ ಬೆಳೆದು ಬಂದ ಜೈನ ಕಿರುರೂಪ ಚಿತ್ರಗಳ ಹುಟ್ಟಿಗೆ ಕಾರಣವಾಗಿದ್ದು, ನಂತರ ವಿಜಯನಗರದ ಭಿತ್ತಿಚಿತ್ರಗಳಿಗೆ ಪ್ರೇರಣೆಯಾಗಿಯೂ ಬೆಳೆದು ಬಂದಿತು. ವಿಜಯನಗರ ಕಲೆಯ ಪ್ರಭಾವವು ಪೂರ್ವಕ್ಕೆ ಮಹಾರಾಷ್ಟ್ರ, ಪಶ್ಚಿಮಕ್ಕೆ ಓರಿಸ್ಸಾ, ದಕ್ಷಿಣಕ್ಕೆ ಕನ್ಯಾಕುಮಾರಿಯವರೆಗೂ ಹಬ್ಬಿತ್ತು. ಹೀಗೆ ದಕ್ಷಿಣ ಭಾರತದಲ್ಲಿಯೇ ಅತ್ಯಂತ ಬಲಿಷ್ಠ ಹಾಗೂ ಹಿಂದೂ ಸಾಮ್ರಾಜ್ಯವನ್ನು ಕಟ್ಟಿದ ವಿಜಯನಗರ ಅರಸರು ಲಲಿತಕಲೆಗಳನ್ನು ಪ್ರೋತ್ಸಾಹಿಸಿದ್ದರು. ಅದರಲ್ಲೂ ಭಿತ್ತಿಚಿತ್ರ, ಶಿಲ್ಪ, ವಾಸ್ತುಶಿಲ್ಪಗಳು ವಿಶಿಷ್ಟವಾದ ಪರಂಪರೆಯನ್ನೇ ನಮ್ಮ ದೇಶಕ್ಕೆ ನೀಡಿವೆ. ಈ ಅವಧಿಯಲ್ಲಿ ರಚನೆಯಾದ ಭಿತ್ತಿಚಿತ್ರಗಳಲ್ಲಿ ಸ್ಥಳೀಯ ಪ್ರಭಾವಗಳೊಂದಿಗೆ (ಭಾರತೀಯ ಅಂಶಗಳುಳ್ಳ) ಚಿತ್ರಗಳು ರಚನೆಗೊಂಡವು. ಅನಂತರ ಹಿಂದೂ ರಾಜರುಗಳ ಮೇಲೆ ಟರ್ಕಿ ಮೂಲದ ಮುಸಲ್ಮಾನ್ ದೊರೆಗಳು ಆಕ್ರಮಣ ನಡೆಸಿದರು. ಹಾಗೂ ಉತ್ತರದ ದಖ್ಖನ್ ಪ್ರದೇಶದಲ್ಲಿ ಮುಸ್ಲೀಂ ಸಾಮ್ರಾಜ್ಯವನ್ನು ಸ್ಥಾಪಿಸಿದರು. ಇದು ಕಲೆಯ ಮೇಲೂ ಪ್ರಭಾವ ಬೀರಿತು. ಟರ್ಕಿ ಮತ್ತು ಪರ್ಷಿಯನ್ ಮೂಲದ ಕಲಾವಿದರೂ ಇವರೊಂದಿಗೆ ಬಂದಿದ್ದು, ತಮ್ಮ ಪರ್ಷಿಯನ್ ಕಲಾ ಶೈಲಿಯು ವಿಜಯನಗರ ಕಲಾಶೈಲಿಯೊಂದಿಗೆ ಸೇರಿಕೊಂಡು. ದಖ್ಖನ್‌ದ ವಿಶಿಷ್ಠ ಶೈಲಿಯೇ ರೂಪುಗೊಂಡಿತು." ಈ ದಖ್ಖನ್ ಕಲಾಶೈಲಿಯು ಉತ್ತರ ಕರ್ನಾಟಕದಲ್ಲಿ ದಟ್ಟವಾಗಿ ಹರಡಿಕೊಂಡಿತು. ವಿಜಯನಗರ ಕಲಾಶೈಲಿಯಷ್ಟೇ ಪ್ರಭಲವಾಗಿ ಬೆಳೆದು ಬಂದಿದ್ದು, ಉತ್ತರ ಕರ್ನಾಟಕದಲ್ಲಿ ಭಿತ್ತಿ ಚಿತ್ರಗಳ ಕಲಾ ಪರಂಪರೆಯನ್ನು ಈ ಕೆಳಗಿನಂತೆ ಗುರುತಿಸಿಕೊಳ್ಳಲಾಗಿದೆ.

---

೧೦. ಪ್ರೋ ಎಂ.ಎಚ್.ಕೃಷ್ಣಯ್ಯ: "ಶೃಂಗಾರ ಲಹರಿ", ಪು.೪೮.




ಪ್ರಸ್ತುತ ಈ ಮೂರನೆಯ ಅಧ್ಯಾಯದಲ್ಲಿ ನಿಪ್ಪಾಣಿವಾಡೆ ಹಾಗೂ ಭಿತ್ತಿ ಚಿತ್ರಕಲೆಯ ಸ್ವರೂಪದ ಕುರಿತು ಅಧ್ಯಯನ ಮಾಡುತ್ತಿದ್ದು. ಈ ವಾಡೆಯ ರಚನೆ ಐತಿಹಾಸಿಕ ಹಿನ್ನೆಲೆ ಹಾಗೂ ಭಿತ್ತಿಯ ರಚನೆ ಈ ಭಿತ್ತಿಯ ಮೇಲೆ ಪ್ರಾಚೀನ ಗ್ರಂಥಗಳ ಪ್ರಭಾವ ಎಷ್ಟರ ಮಟ್ಟಿಗೆ ಆಗಿವೆ ಎಂಬುದನ್ನು ಕಂಡುಕೊಳ್ಳುವ ಪ್ರಯತ್ನ ಮಾಡಲಾಗಿದೆ. ಹಾಗೂ ಅಧ್ಯಯನದ ಅನುಕೂಲತೆಯ ದೃಷ್ಟಿಯಿಂದ ಈ ಪ್ರಬಂಧದಲ್ಲಿ ಭಿತ್ತಿ ರಚನೆ ಮತ್ತು ಪರಿಕರಗಳ ಕುರಿತು ಪ್ರಮುಖವಾಗಿ ಅಧ್ಯಯನ ಮಾಡಲಾಗಿದ್ದು, ಇತರ ಕಡೆ ಇರುವ ಭಿತ್ತಿ ಮತ್ತು ಚಿತ್ರಗಳನ್ನು ಸಂದರ್ಭೋಚಿತವಾಗಿ ಗಮನಿಸಲಾಗಿದೆ.

**ಭಿತ್ತಿಯ ಸ್ವರೂಪ:**

ಆಂಗ್ಲಭಾಷೆಯ Mural ಶಬ್ದವು ಲ್ಯಾಟಿನ ಭಾಷೆಯ Murus ದಿಂದ ಬಂದಿದೆ. Murus (ಎಂದರೆ wall) ಅರ್ಥವು ಗೋಡೆ ಎಂದಾಗುತ್ತದೆ. ಗೋಡೆಯ ಮೇಲೆ ಬಣ್ಣದಿಂದ ಬರೆದ ಚಿತ್ರ ಮತ್ತು ಕೆತ್ತಿ ಕೊರೆದು ಅಂಟಿಸಿ ಹೀಗೆ ಇತರ ಯಾವುದೇ ವಿಧಾನದಿಂದ ಗೋಡೆಯ ಮೇಲೆ ರೂಪಿಸಿದ ಚಿತ್ರಗಳು Mural ವ್ಯಾಪ್ತಿಯಲ್ಲಿ ಬರುತ್ತವೆ ಎಂದು ಕ್ಯಾಂಬ್ರಿಜ್ ವಿಶ್ವಕೋಶ ತಿಳಿಸುತ್ತದೆ. ಗೋಡೆ ಮತ್ತು ಮೇಲ್ಛಾವಣಿಗಳನ್ನು ವರ್ಣಚಿತ್ರಗಳಿಂದ ಅಲಂಕರಿಸುವ ವಿಧಾನವನ್ನು ಭಿತ್ತಿಚಿತ್ರಕಲೆ ಎಂದು ಆರ್ಕ್ಸ್‌ಫೋರ್ಡ್ ಶಬ್ದಕೋಶದಲ್ಲಿ ಹೇಳಲಾಗಿದೆ.[೧೨] ಕನ್ನಡ ಜಾನಪದ ವಿಶ್ವಕೋಶವು ಭಿತ್ತಿಚಿತ್ರ ಎಂದರೆ ಗೋಡೆಯ ಮೇಲೆ ಬರೆದಿರುವ ಚಿತ್ರವೆಂದು ಹೇಳಿ ಭಿತ್ತಿ ಎಂಬುದಕ್ಕೆ ಗೋಡೆ, ಕುಡ್ಯ, ಮೂಲ, ತಳ, ಹಿನ್ನೆಲೆ ಚಿತ್ರವನ್ನು ಬರೆಯುವ ಮೂಲಾಧಾರಗಳಾದ ಬಟ್ಟೆ ಗೋಡೆ ಮೊದಲಾದ ಸಾಧನವೆಂದು ಅರ್ಥಕೊಟ್ಟಿದೆ.

---

೧೧. ಶ್ರೀ ಬಿ.ಎಂ.ಪಾಟೀಲ: "ಕರ್ನಾಟಕದ ಕಿರುರೂಪ ಚಿತ್ರಗಳು" (ಅಪ್ರಕಟಿತ ಲೇಖನ)

೧೨. ಡಾ.ಯಾದಪ್ಪ ಪರದೇಶಿ: ಉತ್ತರಕರ್ನಾಟಕದ ಭಿತ್ತಿಚಿತ್ರಕಲೆ, ಪು.೨೫.

ಚಿತ್ರರಚಿಸುವ ಆಧಾರದ ಮೇಲೆ ಲೇಪಿಸುವ ಮಿಶ್ರಣದ ಪದರಕ್ಕೆ ಭಿತ್ತಿ ಎಂದು ಕರೆಯುತ್ತೇವೆ. ಭಾರತೀಯ ಶಿಲ್ಪಶಾಸ್ತ್ರವು ಈ ಮಿಶ್ರಣದ ಲೇಪನ ಪದರನ್ನು ಭಿತ್ತಿ, ಭೂಮಿ, ಕುಡ್ಯ ಎಂದು ಹೆಸರಿಸಿವೆ. ಬೇರೆ ಬೇರೆ ಪ್ರಕಾರದ ಭಿತ್ತಿಯನ್ನು ಸಿದ್ಧಗೊಳಿಸಲು ವಿವಿಧ ವಸ್ತುಗಳನ್ನು ಉಪಯೋಗಿಸಿ ನಿರ್ಮಿಸಿರುವುದು ಕಂಡುಬರುತ್ತದೆ. ಭಾರತೀಯ ಭಿತ್ತಿಚಿತ್ರಗಳ ಇತಿಹಾಸದಲ್ಲಿ ಪ್ರಮುಖವಾಗಿ ಎರಡು ರೀತಿಯ ಭಿತ್ತಿಗಳನ್ನು ಗುರುತಿಸಲಾಗಿದೆ.

೧. ಮಣ್ಣಿನ ಭಿತ್ತಿ (Mud Plaster)

೨. ಗಾರೆ ಭಿತ್ತಿ (Lime Plaster Ground)

**ಮಣ್ಣಿನ ಭಿತ್ತಿ** (Mud Plaster) :

ಭಾರತದ ಪ್ರಾಚೀನ ಮತ್ತು ಕೆಲವು ಮಧ್ಯಯುಗದ ಭಿತ್ತಿಚಿತ್ರಗಳಲ್ಲಿ ಈ ವಿಧಾನವು ಬಳಕೆಗೊಂಡಿರುವುದು ಕಂಡುಬರುತ್ತದೆ. ಮಣ್ಣಿನ ಭಿತ್ತಿ ನಿರ್ಮಾಣಕ್ಕೆ ಮೂರು ವಿಧದ ಮಣ್ಣು ಉಪಯೋಗಿಸಬಹುದೆಂದು "ಕಾಶ್ಯಪ ಶಿಲ್ಪಶಾಸ್ತ್ರ" ಹೇಳುತ್ತದೆ.[೧೩]

೧. ಜಾಂಗಲ

೨. ಅನುರೂಪ

೩. ಸಮ್ಮಿಶ್ರ

**ಜಾಂಗಲ:**

ಸುಲಭವಾಗಿ ಅಗೆಯಲು ಸಾಧ್ಯವಾಗದ ಬಹುಗಟ್ಟಿಯಾದ ಭೂಮಿಯಿಂದ ಅಗೆದು ತೆಗೆದ ಮಣ್ಣಿಗೆ ಜಾಂಗಲವೆಂದು ಹೆಸರು.

**ಅನುರೂಪ:**

ಸುಣ್ಣ ಮರಳು ಬೆರೆತಿದ್ದು ಹೆಚ್ಚಿನ ಶ್ರಮವಿಲ್ಲದೇ ಅಗೆಯಲು ಬರುವಂತಹ ಭೂಮಿಯಲ್ಲಿ ಅಥವಾ ಭೂಮಿಯು ಮನೋಹರವಾಗಿದ್ದರೆ ಅಲ್ಲಿ ಸಿಗುವ ಮಣ್ಣಿಗೆ ಅನುರೂಪವೆಂದು ಕರೆಯುವರು.

**ಸಮ್ಮಿಶ್ರ:**

ಈ ಮೇಲಿನ ಎರಡೂ ಬಗೆಯ ಮಣ್ಣು ಬೆರೆತಿದ್ದರೆ ಅದನ್ನು "ಸಮ್ಮಿಶ್ರ"ವೆಂದು ಕರೆಯುವರು.

ಮಣ್ಣಿನ ಭಿತ್ತಿಯು ಒಂದರ ಮೇಲೊಂದರಂತೆ ಹಲವರು ಪದರುಗಳನ್ನು ಹೊಂದಿರುತ್ತದೆ. ತೀರ

---

೧೩ ಡಾ.ಯಾದಪ್ಪ ಪರದೇಶಿ: ಉತ್ತರಕರ್ನಾಟಕದ ಭಿತ್ತಿಚಿತ್ರಕಲೆ, ಪು.೬೧.

ಮೇಲಿನ ಪದರು ಅತೀ ತೆಳುವಾಗಿ ನಿರ್ಮಿಸಲಾಗಿರುತ್ತದೆ. ಗೋಡೆಗೆ ಮೆತ್ತಿನ ಈ ಮಣ್ಣಿನಭಿತ್ತಿಯು ಸೀಳದಂತೆ, ಕಳಚಿ ಬೀಳದಂತೆ ಮಣ್ಣಿನಲ್ಲಿ ಒಣಹುಲ್ಲು, ಹೊಟ್ಟು ಕೂದಲುಗಳಂತಹ ನಾರು ಪದಾರ್ಥಗಳನ್ನು ಸೇರಿಸಲಾಗುತ್ತದೆ. ಈ ನಾರುಪದಾರ್ಥಗಳ ಮಿಶ್ರಣವು ಗಟ್ಟಿಯಾಗಿ ಕುಳಿತುಕೊಳ್ಳಲು ಸಹಾಯ ಮಾಡುತ್ತವೆ. ಆಕಳ ಸೆಗಣಿಯನ್ನು ಈ ಮಿಶ್ರಣಕ್ಕೆ ಸೇರಿಸಿದಾಗ ಭಿತ್ತಿಯ ಮಿಶ್ರಣವು ಮೃದುವಾಗುವುದು. ಆದರೆ ಇದರಿಂದ ಭಿತ್ತಿಯು ಕೀಟಗಳ ದಾಳಿಗೆ ಒಳಗಾಗುತ್ತದೆ. ಕಾರಣ ಸೆಗಣಿಯು ಒಂದು ಸಾವಯವ ವಸ್ತು ಆಗಿದ್ದು, ಇದರಿಂದ ಕೀಟಗಳ ಸಹಜ ಆಹಾರವಾಗುವುದಲ್ಲದೇ ಇದರಿಂದ ಭಿತ್ತಿಯು ಬಹುಬೇಗ ಶಕ್ತಿಹೀನವಾಗುತ್ತದೆ.[೧೪] ಎಂಬ ವಿವರಗಳು ಮಣ್ಣಿನ ಭಿತ್ತಿಯ ಅಲ್ಪಾಯುಷ್ಯವನ್ನು ತಿಳಿಸುತ್ತವೆ.

ಇಂತಹ ಮಣ್ಣಿನ ಭಿತ್ತಿಯು ಅಜಂತಾ, ಭಾಗ್, ಸಿತ್‌ನಿವಾಸಲ್‌ಗಳಲ್ಲಿ ಕಂಡುಬರುತ್ತವೆ ಎನ್ನುವ ಇತಿಹಾಸಕಾರ ಜೆ.ಸಿ.ನಾಗ್ಪಾಲ್ ಅವರು ಅಭಿಪ್ರಾಯ ಪಟ್ಟಿದ್ದಾರೆ. ಇದನ್ನು ಸಮ್ಮತಿಸಿ ಮಣ್ಣಿನ ಭಿತ್ತಿಚಿತ್ರಗಳು ಉತ್ತರಕರ್ನಾಟಕದಲ್ಲಿ ಬೆಳಗಾಂವ್ ಜಿಲ್ಲೆಯ ನಿಪ್ಪಾಣಿವಾಡೆ ಹಾಗೂ ಅಥಣಿಯ ಗಚ್ಚಿನಮಠ ಹಾಗೂ ಹಳೆಯ ನಿಪ್ಪಾಣಿಕರವಾಡೆ, ಗುಲಬರ್ಗಾ ಜಿಲ್ಲೆಯ ಸುರಪುರದ ಅಣ್ಣಯ್ಯನಮಠ, ಬಾಗಲಕೋಟ ಜಿಲ್ಲೆಯ ಗುಳೇದಗುಡ್ಡದ ಹೊಸಮನಿಗೌಡರ ಮನೆ, ಗದಗ ಜಿಲ್ಲೆಯ ನರಗುಂದದ ವೆಂಕಟೇಶ್ವರ ದೇವಸ್ಥಾನಗಳಲ್ಲಿ ಭಿತ್ತಿ ಚಿತ್ರ ರಚನೆಗಾಗಿ ಮಣ್ಣಿನ ಭಿತ್ತಿ ರಚಿಸಿರುವ ಬಗ್ಗೆ ಡಾ.ಯಾದಪ್ಪ ಪರದೇಶಿಯವರು[೧೫] "ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ"ಯಲ್ಲಿ ವಿವರಿಸಿದ್ದಾರೆ.

ಕ್ರಿ.ಪೂ.೨೦೦ ರಲ್ಲಿ ಪ್ರಾರಂಭವಾಗಿ ಕ್ರಿ.ಶ.೭ನೇ ಶತಮಾನದವರೆಗೆ ರಚನೆಗೊಂಡ ಅಜಂತೆಯ ಭಿತ್ತಿಚಿತ್ರಗಳು ಈವರೆಗೂ ಅಚ್ಚಳಿಯದೇ ಉಳಿದುಬಂದಿರುವುದು ಹಾಗೂ ಉತ್ತರ ಕರ್ನಾಟಕದ ಮಣ್ಣಿನ ಭಿತ್ತಿಚಿತ್ರಗಳು (೧೭ ಮತ್ತು ೧೮ನೇ ಶತಮಾನದಲ್ಲಿ ರಚನೆಯಾಗಿರುವವು) ಉಜ್ವಲವರ್ಣಗಳೊಂದಿಗೆ ಕಂಗೊಳಿಸುತ್ತಿರುವುದು ಕಂಡುಬರುತ್ತದೆ. ಹೀಗಿರುವಾಗ ಇತಿಹಾಸಕಾರ ಜೆ.ಸಿ.ನಾಗ್ಪಾಲ್ ಅವರಾಗಲಿ, ಡಾ.ಯಾದಪ್ಪ ಪರದೇಶಿಯವರಾಗಲಿ ವ್ಯಕ್ತಪಡಿಸಿರುವಂತೆ ಭಿತ್ತಿಯ ಮೃಧುತ್ವಕ್ಕೆ ಬಳಸುವ ಸೆಗಣಿಯಿಂದ ಕೀಟಗಳಿಗೆ ಸಹಜ ಆಹಾರವಾಗುವದಲ್ಲದೇ ಇದರಿಂದ ಭಿತ್ತಿಯು ಬಹುಬೇಗ ಶಕ್ತಿಹೀನವಾಗುತ್ತದೆ. ಹಾಗೂ ಮಣ್ಣಿನ ಭಿತ್ತಿಯು "ಅಲ್ಪಾಯುಷಿ" ಎನ್ನುವ ವಾದವನ್ನು ಒಪ್ಪುವುದು ಕಷ್ಟವಾಗುತ್ತದೆ. ಯಾಕೆಂದರೆ ಸಾವಿರಾರು ವರ್ಷಗಳಿಂದ ಉಜ್ವಲವರ್ಣಗಳೊಂದಿಗೆ ಕಂಗೊಳಿಸುತ್ತಿರುವ ಮಣ್ಣಿನ ಭಿತ್ತಿಚಿತ್ರಗಳು ನಾಗರೀಕತೆಯ ಇತಿಹಾಸವನ್ನು ಸಾರುತ್ತಿವೆ.

ಪ್ರಸ್ತುತ ಈ ವಿಧಾನಕ್ಕೆ ಸೇರಿಕೊಳ್ಳುತ್ತಿರುವ ನಿಪ್ಪಾಣಿವಾಡೆ ಭಿತ್ತಿಚಿತ್ರಗಳು ಸುಮಾರು ೧೮ನೇ

---

೧೪. ಜೆ.ಸಿ.ನಾಗ್ಪಾಲ್: "ಮ್ಯುರಲ್ ಪೇಂಟಿಂಗ್ಸ್ ಇನ್ ಇಂಡಿಯಾ", ಪು.೨೫.

೧೫. ಡಾ.ಯಾದಪ್ಪ ಪರದೇಶಿ: "ಉತ್ತರಕರ್ನಾಟಕದ ಭಿತ್ತಿಚಿತ್ರಕಲೆ", ಪು.೬೧.

೧೬. ಡಾ.ಶಿವರಾಮ ಕಾರಂತರು: "ಕರ್ನಾಟಕದಲ್ಲಿ ಚಿತ್ರಕಲೆ", ಪು. ೮೯.

ಶತಮಾನದ ಪ್ರಾರಂಭದಲ್ಲಿ ರಚನೆಗೊಂಡ ಭಿತ್ತಿಚಿತ್ರಗಳಾಗಿವೆ. ಹಳೆಯದಾದ ಈ ವಾಡೆಯನ್ನು ಅಲ್ಲಲ್ಲಿ ಸಿಮೆಂಟಿನಿಂದ ದುರಸ್ತಿಗೊಳಿಸುತ್ತಿದ್ದು, ಮೂಲತಃ ವಾಡೇದಭಿತ್ತಿಯು ಮಣ್ಣಿನ ಭಿತ್ತಿ ಲೇಪನವಿರುವುದು ಗೊತ್ತಾಗುತ್ತದೆ. ಡಾ.ಶಿವರಾಮ ಕಾರಂತರು[೧೬] ಈ ವಾಡೆಯ ಭಿತ್ತಿಯ ಕುರಿತು "ಕರ್ನಾಟಕದ ಚಿತ್ರಕಲೆ"ಯಲ್ಲಿ ಸ್ಪಷ್ಟಪಡಿಸಿರುವರು. ಅಂತೆಯೇ ಡಾ.ಯಾದಪ್ಪ ಪರದೇಶಿಯವರು[೧೬ಎ] "ಉತ್ತರಕರ್ನಾಟಕದ ಭಿತ್ತಿಚಿತ್ರಕಲೆ"ಯಲ್ಲಿ ಮಣ್ಣಿನ ಭಿತ್ತಿಯೆಂದು ಅಭಿಪ್ರಾಯಪಟ್ಟಿರುವರು. ಈ ಹಿನ್ನೆಲೆಯ್ಲಲಿ ನಿಪ್ಪಾಣಿವಾಡೆಯ ಭಿತ್ತಿಯು ಮಣ್ಣಿನ ಭಿತ್ತಿಯೆಂದು ಸ್ಪಷ್ಟವಾಗುತ್ತದೆ. ಇದರೊಂದಿಗೆ ಹಳಿಯಾಳ ಹತ್ತಿರ ಬಿ.ಕೆ.ಹಳ್ಳಿಯ ಶ್ರೀರಾಮನ ಗುಡಿಯ ಭಿತ್ತಿಚಿತ್ರಗಳೂ ಮಣ್ಣಿನಭಿತ್ತಿ ಚಿತ್ರರಚನೆಯಾಗಿವೆ.

**ಗಾರೆ ಚಿತ್ರ (Lime Plaster Grond) :**

ಗಾರೆಭಿತ್ತಿ ರಚನೆಯಲ್ಲಿ ಸುಣ್ಣವು ಪ್ರಮುಖ ವಸ್ತು ಆಗಿದ್ದು, ಅದರ ಜೊತೆಗೆ ಉಸುಕು, ಕಲ್ಲಿನಪುಡಿ, ವಜ್ರಸರಿ ಇವುಗಳನ್ನು ಉಪಯೋಗಿಸಲಾಗುತ್ತದೆ. ಅದರ ಜೊತೆಗೆ ತಾಳಸರ, ಬೆಲ್ಲ, ಬೇಲದಕಾಯಿ, ಅಂಟು ಹೀಗೆ ವಿವಿಧ ವಸ್ತುಗಳನ್ನು ಪೂರಕವಾಗಿ ಸೇರಿಸುವರು. ಮಧ್ಯಯುಗದ ಹೊತ್ತಿಗೆ ಮಣ್ಣಿನ ಭಿತ್ತಿಯೊಂದಿಗೆ ಗಾರೆಯ ಭಿತ್ತಿಯೂ ಪ್ರಾರಂಭವಾಯಿತು. ಉತ್ತರ ಕರ್ನಾಟಕದಲ್ಲಿ ಹಂಪೆ, ಕನಕಗಿರಿ, ಬಿಜಾಪೂರ, ಕುಮಟಗಿ (ಗುಲಬರ್ಗಾ, ಬೀದರ) ನರಗುಂದದ ಅರಮನೆ, ಮಹಾಲಿಂಗಪೂರದ ಮಹಾಲಿಂಗೇಶ್ವರ ಮಠ, ಅಮ್ಮಿನಭಾವಿಯ ಹಿರೇಮಠದ ಭಿತ್ತಿ ಚಿತ್ರಗಳು ಗಾರೆಭಿತ್ತಿ ಚಿತ್ರಗಳಾಗಿವೆ.

**ಭಿತ್ತಿ ಸಿದ್ಧತಾ ಹಂತಗಳು:**

ಚಿತ್ರರಚನೆಗಿಂತಲೂ ಪೂರ್ವದಲ್ಲಿ ಭಿತ್ತಿಸಿದ್ಧತೆಯನ್ನು ಮಾಡಿಕೊಳ್ಳುವ ಅಂಶ ತುಂಬಾ ಕೂತೂಹಲಕಾರಿಯಾಗಿದೆ. ಮಾಧ್ಯಮವನ್ನು ಸಂಸ್ಕರಣೆಗೊಳಿಸುವುದರಿಂದ ಹಿಡಿದು ಚಿತ್ರರಚನೆಗಾಗಿ ಭಿತ್ತಿಯನ್ನು ಸಜ್ಜುಗೊಳಿಸುವವರೆಗೆ ಅನೇಕ ಹಂತಗಳಲ್ಲಿ ನಡೆಯುತ್ತದೆ. ಅದರಲ್ಲಿ ಪ್ರಮುಖವಾಗಿ ೪ ಹಂತಗಳನ್ನು ಮಾಡಿಕೊಂಡಿರುವ ಡಾ.ಯಾದಪ್ಪ ಪರದೇಶಿಯವರು[೧೭]

೧. ಆಧಾರ ಸಂಸ್ಕರಣ ಹಂತ

೨. ಮಿಶ್ರಣ ಲೇಪನ ಹಂತ

೩. ಭಿತ್ತಿನುಣುಪುಗೊಳಿಸುವ ಹಂತ

೪. ಹಿನ್ನೆಲೆ ಲೇಪನದ ಹಂತ

**ಮಾಧ್ಯಮ (ಆಧಾರ) ಸಂಸ್ಕರಣ ಹಂತ:**

ಯಾವ ಮಾಧ್ಯಮದ ಮೇಲೆ ಚಿತ್ರರಚನೆ ಮಾಡಲಾಗುತ್ತದೆಯೋ ಆದನ್ನೇ ಆಧಾರವೆಂದು ಕರೆದಿರುವರು. ಉದಾ: ಕಲ್ಲಿನ ಗೋಡೆ, ಇಟ್ಟಿಗೆಯ ಗೋಡೆ, ಮರ, ಲೋಹ ಹಾಗೂ ಗಾಜುಗಳ ಮೇಲೆ ಭಿತ್ತಿ ಚಿತ್ರ

---

೧೬.ಎ. ಡಾ.ಯಾದಪ್ಪ ಪರದೇಶಿ: "ಉತ್ತರಕರ್ನಾಟಕದ ಭಿತ್ತಿಚಿತ್ರಕಲೆ", ಪು.೮೯.

೧೭. ಡಾ.ಯಾದಪ್ಪ ಪರದೇಶಿ: "ಉತ್ತರಕರ್ನಾಟಕದ ಭಿತ್ತಿಚಿತ್ರಕಲೆ", ಪು.೬೩.

ರಚನೆಯಾಗಿದ್ದುದು ಕಂಡು ಬರುತ್ತದೆ. "ವಿಷ್ಣುಧರ್ಮೋತ್ತರವು" ಮೊದಲು ಗೋಡೆಯನ್ನು ಸಮತಟ್ಟು ಮಾಡಲು ತಿಳಿಸಿ ಅದಕ್ಕಾಗಿ ಲಿಂಗಸೂತ್ರವನ್ನು ಉಪಯೋಗಿಸಲು ತಿಳಿಸುತ್ತದೆ. "ಸಮರಾಂಗಣ ಸೂತ್ರಧಾರವು" ಗೋಡೆಯನ್ನು ಬಿಸಿನೀರು ಮತ್ತು ಸುಣ್ಣದ ನೀರಿನಿಂದ ತೊಳೆದು ಸಂಸ್ಕರಿಸಲು ಹೇಳುತ್ತದೆ.

**ಮಿಶ್ರಣ ಲೇಪನ ಹಂತ:**

ಭಿತ್ತಿಸಿದ್ಧತಾ ವಿಧಾನದಲ್ಲಿ ಮಹತ್ವದ ಹಂತ ಇದಾಗಿದ್ದು, ಬೇರೆ ಬೇರೆ ವಿಧಾನಗಳಿಗನುಸಾರವಾಗಿ ಬೇರೆ ಬೇರೆ ವಸ್ತುಗಳನ್ನು ಕೂಡಿಸಿ ಮಿಶ್ರಣ ತಯಾರಿಸಿಕೊಂಡು ಲೇಪಿಸಲಾಗುತ್ತದೆ. ಶಿಲ್ಪಶಾಸ್ತ್ರಗಳು ಅನೇಕ ವಿಧದ ಮಿಶ್ರಣ ತಯಾರಿಸಿ ಲೇಪಿಸುವ ವಿಧಾನದ ಕುರಿತು ಹೇಳಲಾಗಿದ್ದು, ನಮಗೆ ಮಣ್ಣಿನ ಭಿತ್ತಿಗೆ ಬೇಕಾಗುವ ಮಿಶ್ರಣಲೇಪನದ ಕುರಿತು ಇಲ್ಲಿ ಹೇಳಲಾಗಿದೆ. ಕಾಶ್ಯಪ ಶಿಲ್ಪಶಾಸ್ತ ಮಿಶ್ರಣಲೇಪನದ ಕುರಿತು ಹೀಗೆ ಹೇಳಿದೆ. ನದಿತೀರದಲ್ಲಾಗಲಿ ಕೆರೆಯಿಂದಾಗಲಿ ಶುದ್ಧವಾದ ನೀರಿನಲ್ಲಿರುವ ಮಣ್ಣನ್ನು ತೆಗೆಯಬೇಕು ಈ ರೀತಿ ತೆಗೆದ ಮಣ್ಣು, ಭೂಮಿಯ ಗುಣಧರ್ಮಕ್ಕನುಸಾರವಾಗಿ ಕೆಂಪು, ಬಿಳಿ, ಹಳದಿ ಮತ್ತು ಕಪ್ಪು ಎಂದು ನಾಲ್ಕು ಬಗೆಯಲ್ಲಿ ದೊರೆಯುವದು. ಹೀಗೆ ತೆಗೆದುಕೊಂಡ ಮಣ್ಣಿಗೆ ನೀರು ಬೆರೆಸಿ ಕಲಕಿ ಅಮೇಲೆ ಹಾಲು ಒಸರುವ ನಾಲ್ಕು ಮರಗಳ ತೊಗಟೆಯಿಂದ ರಸ ತಯಾರಿಸಿ ಮಣ್ಣಿಗೆ ಬೆರಸಿ ಚೆನ್ನಾಗಿ ನಾದಬೇಕು. ನಂತರ ತ್ರಿಫಲಾಚೂರ್ಣದ ಪುಡಿಯನ್ನು ನೀರಿನಲ್ಲಿ ಕಲೆಸಿ ಆ ನೀರನ್ನು ಮಣ್ಣಿಗೆ ಸೇರಿಸಿ ಚೆನ್ನಾಗಿ ಮರ್ಧಿಸಬೇಕು ನಂತರ ಸೂಕ್ಷ್ಮವಾದ ಮರಳನ್ನು ಮತ್ತು ಕಲ್ಲಿನ ಪುಡಿಯನ್ನು ಸಮನಾದ ಅಳತೆಯಲ್ಲಿ ತೆಗೆದುಕೊಂಡು ಮಿಶ್ರಣಮಾಡಿ ಕಾಲುಭಾಗದಷ್ಟು ಮಣ್ಣಿನಲ್ಲಿ ಚೆನ್ನಾಗಿ ಬೆರೆಸಬೇಕು. ಆ ಮೇಲೆ ಬಲಿತ ತೆಂಗಿನಕಾಯಿಯ ನೀರನ್ನು ಮಣ್ಣಿಗೆ ಬೆರೆಸಬೇಕು. ಹಾಗೂ ಅದೇ ತೆಂಗಿನ ನಾರನ್ನು ಕುಟ್ಟಿ ಆದರ ರಸವನ್ನು ಹಾಗೂ ಕುಟ್ಟಿದ ನಾರನ್ನು ಮಣ್ಣಿಗೆ ಬೆರೆಸಿ ಹತ್ತುದಿನಗಳ ಕಾಲ ನೆನೆಹಾಕಲು ಇಡಬೇಕು. ತೆಂಗಿನನಾರು ಮಣ್ಣು ಭದ್ರವಾಗಿ ಹಿಡಿದುಕೊಳ್ಳಲು ಸಹಾಯಮಾಡುತ್ತದೆ. ಆಮೇಲೆ ಶ್ರೀವೇಷ್ಟಕ, ಗುಗ್ಗಳು, ಶಿಲಾರಾಳ, ಸರ್ಜರಸ, ಇವುಗಳನ್ನು ಪುಡಿಮಾಡಿ ಮಣ್ಣಿನಭಾಗದ ೧/೧೬ ಪ್ರಮಾಣದಷ್ಟು ಬೆರೆಸಬೇಕು. ಆ ಮೇಲೆ ಬಿಲ್ವಪತ್ರಿ ಕಾಯಿ, ಬೇಲದ ಕಾಯಿಗಳ ರಸವನ್ನು ಅವುಗಳ ತಿರುಳನ್ನು ನುಣ್ಣಗೆ ರುಬ್ಬಿ ಅದನ್ನು ಮಣ್ಣಿಗೆ ಬೆರೆಸಬೇಕು. ಇದರ ಪ್ರಮಾಣ ಮಿಶ್ರಣದ ೧/೧೫ ಭಾಗದಷ್ಟಿರಬೇಕು. ಅಮೇಲೆ ಕಾವಿಮಣ್ಣು, ಅರಿದಾಳ, ಚಂದನ, ಪಚ್ಚಕರ್ಪೂರಗಳನ್ನು ಪುಡಿಮಾಡಿ ಮಣ್ಣಿನ ಮಿಶ್ರಣದಲ್ಲಿ ಬೆರೆಸಬೇಕು. ಈ ಒಟ್ಟು ಮಿಶ್ರಣವನ್ನು ಚೆನ್ನಾಗಿ ಮರ್ಧಿಸಿ ೫ ದಿನವಗಳವರೆಗೆ ನೆನೆಹಾಕಲು ಇಟ್ಟು ನಂತರ ಉಪಯೋಗಿಸಬೇಕು ಎಂದು ಹೇಳುತ್ತದೆ.[೧೮]

---

೧೮. ಡಾ.ಯಾದಪ್ಪ ಪರದೇಶಿ: "ಉತ್ತರಕರ್ನಾಟಕದ ಭಿತ್ತಿಚಿತ್ರಕಲೆ", ಪು.೬೫.

ರಾಯ್.ಸಿ.ಕ್ರಾವೆನ್[೧೯] ಅವರ "ಇಂಡಿಯನ್ ಆರ್ಟ"ದಲ್ಲಿ ತಿಳಿಸಿದಂತೆ ಅಜಂತಾದಲ್ಲಿನ ಭಿತ್ತಿರಚನೆಗೆ ಮಿಶ್ರಣ ಲೇಪನ ಮಾಡಲು (ಕುಂಬಾರರು ಗಡಿಗೆ ಮಾಡುವ) ಜೇಡಿಮಣ್ಣು ತೆಗೆದುಕೊಂಡು ಅದಕ್ಕೆ ಆಕಳ ಸೆಗಣಿ, ಕೊಚ್ಚಿದ ಒಣಹುಲ್ಲು, ಪ್ರಾಣಿಗಳ ಕೂದಲುಗಳನ್ನು ಸೇರಿಸಿ ಚೆನ್ನಾಗಿ ಕಲಕಿ ಅದನ್ನು ನೆನೆಯಲು ಬಿಟ್ಟು ಕೆಲವು ದಿನಗಳ ನಂತರ ನೆನೆದು ಹದವಾದ ಬೆಣ್ಣೆ ಯಂತಹ ಮಿಶ್ರಣವನ್ನು ಗುಹೆಯ ಶಿಲಾಗೋಡೆಗಳಿಗೆ ಲೇಪಿಸಲಾಗಿದೆ. ಲೇಪಿಸಿದ ಪದರು ಒಂದೂವರೆ ಅಥವಾ ಎರಡು ಇಂಚು ದಪ್ಪವಾಗಿರಬೇಕು. ಹಲವು ಬಾರಿ ಮಿಶ್ರಣವನ್ನು ಲೇಪಿಸುತ್ತ ಭಿತ್ತಿಯ ಮೇಲ್ಮೈಯನ್ನು ಸಮತಟ್ಟುಗೊಳಿಸಿದ್ದಾರೆ. ನಂತರ ಈ ಮಿಶ್ರಣ ಒಣಗಿದ ತರುವಾಯ ಸೂಕ್ಷ್ಮವಾದ ಮರಳು ಮತ್ತು ಬಿಳಿದಾದ ಸುಣ್ಣದಿಂದ ತಯಾರಿಸಿದ ಗಾರೆಯ ಲೇಪನವನ್ನು ಮಾಡಿ ಇದು ಒಣಗಿದ ನಂತರ ಸುಣ್ಣದ ಹಿನ್ನೆಲೆ ಕೊಟ್ಟು ಚಿತ್ರರಚಿಸಲಾಗಿದೆ ಎಂದಿರುವರು.

ಪ್ರೋ.ಎಂ.ಎಚ್.ಕೃಷ್ಣಯ್ಯ[೨೦] ಅವರು "ಶೃಂಗಾರ ಲಹರಿ"ಯಲ್ಲಿ ಬಾದಾಮಿಯ ಭಿತ್ತಿಯ ರಚನೆಗೆ ಮಿಶ್ರಣ ಲೇಪನಮಾಡಲು ಮರಳನ್ನು ಸೋಸಿ ಸೂಕ್ಷ್ಮಕಣಗಳನ್ನು ಶುದ್ದಗೊಳಿಸಿ ಜೇಡಿಮಣ್ಣಿನೊಂದಿಗೆ ಬೆರಸಿ ಅದಕ್ಕೆ ನಾರು ಕಬ್ಬಿಣದ ಅದಿರು ಸುಣ್ಣ ಮತ್ತು ಅಂಟುಗಳನ್ನು ಕೂಡಿಸಿ, ಚೆನ್ನಾಗಿ ಕಲಸಿ ಮಿಶ್ರಣ ತಯಾರಿಸಿಕೊಂಡು ಲೇಪನ ಮಾಡಲಾಗಿದೆ ಎನ್ನುತ್ತಾರೆ.

ಹೀಗೆ ಬೇರೆ ಬೇರೆ ಪ್ರಕಾರದ ಮಿಶ್ರಣ ಲೇಪನದ ಕ್ರಮಗಳಿದ್ದರೂ ಕೆಲವು ಸಮಾನ ಅಂಶಗಳು ಕಂಡುಬರುತ್ತವೆ. ಜೇಡಿಮಣ್ಣು, ಸುಣ್ಣ, ಉಸುಕು, ನಾರುಪದಾರ್ಥ, ಮಿಶ್ರಣ ಜಿಗುಟಾಗಿರಲು ಬೆರಸುವ ಅಂಟು ದ್ರಾವಕಗಳು ಸಾಮಾನ್ಯವಾಗಿ ಎಲ್ಲ ರೀತಿಯ ಮಿಶ್ರಣದಲ್ಲಿಯೂ ಬಳಕೆಯಾಗಿರುವುದು ಕಂಡುಬರುತ್ತದೆ.

**ಭಿತ್ತಿ ನುಣುಪುಗೊಳಿಸುವ ಹಂತ:**

ಮಿಶ್ರಣಲೇಪನ ಮಾಡಿ ಸಿದ್ಧಗೊಳಿಸಿದ ಭಿತ್ತಿಯನ್ನು ಮತ್ತೆ ಸಮತಟ್ಟುಗೊಳಿಸಿ ನುಣುಪುಗೊಳಿಸುವ ಕ್ರಿಯೆ ಈ ಹಂತದಲ್ಲಿ ನಡೆಯುತ್ತದೆ. "ಸಮರಾಂಗಣ ಸೂತ್ರದ" ಗ್ರಂಥವು ಭಿತ್ತಿನುಣುಪುಗೊಳಿಸುವುದಕ್ಕೆ ಮೂರು ವಿಧಾನಗಳನ್ನು ಹೇಳಿದೆ.[೨೧]

**ವಿಧಾನ ೧:** ಭಿತ್ತಿಗೆ ಈಗಾಗಲೇ ಲೇಪಿಸಿದ ಮಿಶ್ರಣವನ್ನು ನುಣುಪಾಗಿ ಮಾಡಲು ಹಾಲು ಚಿಮುಕಿಸುತ್ತಿರಬೇಕು. ನಂತರ ಸ್ನುಹಿವಸ್ತುಕಾ, ಕುಸ್ಮಂಡ, ಕುಡ್ಡಲಿ, ಅಪಮಾರ್ಗ, ಕಬ್ಬು ಇವುಗಳ ರಸವನ್ನು ತೆಗೆದ ಮೇಲೆ ಒಂದು ವಾರದವರೆಗೆ ಇಟ್ಟು ಸಿಸೋ, ನೀಮ್, ತ್ರಿಫಲಾ, ಕುಟಜಾ ಮತ್ತು ಸಮುದ್ರದ ಉಪ್ಪು ಇವುಗಳೊಡನೆ ಬೆರಸಿ ಭಿತ್ತಿಯ ಮೇಲೆ ಚಿಮುಕಿಸುತ್ತಿರಬೇಕು. ಆಮೇಲೆ ಸ್ವಚ್ಛವಾದ ಬಿಳಿಯ ಸುಣ್ಣದ ಕಲ್ಲನ್ನು ಪುಡಿಮಾಡಿ

೧೯. ಶ್ರೀರಾಯ್.ಸಿ.ಕ್ರಾವೆನ್: "ಇಂಡಿಯನ್ ಆರ್ಟ್, ಪು.೧೨೭.

೨೦. ಪ್ರೋ ಎಂ.ಎಚ್.ಕೃಷ್ಣಯ್ಯ: "ಶೃಂಗಾರ ಲಹರಿ", ಪು.೫೨.

೨೧. ಡಾ.ಯಾದಪ್ಪ ಪರದೇಶಿ: "ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ", ಪು.೬೮.

ಕುದಿಸಿದ ಅಕ್ಕಿಗಂಜಿಯಲ್ಲಿ ಕಲೆಸಿಕೊಂಡು ನಾರಿನಂತಹ ಕುಂಚದಿಂದ ಭಿತ್ತಿಗೆ ಹಲವು ಬಾರಿ ಬಿಟ್ಟು ಬಿಟ್ಟು ಲೇಪಿಸುತ್ತಿರಬೇಕು. ಇದರಿಂದ ಭಿತ್ತಿಯು ನುಣುಪಾಗಿ ಹೊಳಪುಳ್ಳದ್ದಾಗುವುದು ಎಂದು ಹೇಳಿದೆ.

**ವಿಧಾನ ೨:** ಭಿತ್ತಿ ನುಣುಪುಗೊಳಿಸಲು ಕಮಲದ ಹೂವಿನ ಕೊಳದ ದಂಡೆಯ ಮಣ್ಣು, ಭೂಮಿಯ ಬಿಳಿಮಣ್ಣು, ಗಿಡದ ಕೆಳಗಿನ ಬೇರು, ನದಿ ದಂಡೆಯ ಮಣ್ಣು, ಮೃದುವಾದ ಭೂಮಿಯಲ್ಲಿನ ಮಣ್ಣು ಎಲ್ಲವೂ ಬಿಳಿಯಾಗಿರಬೇಕು. ಇವುಗಳನ್ನೆಲ್ಲಾ ಒಟ್ಟು ಸೇರಿಸಿ ಅದಕ್ಕೆ ಶಾಲ್ಮಲಗಿಡ, ಅಶೋಕಗಿಡ, ಕಾಕುಭಗಿಡ, ತ್ರಿಪಲೋದ್ಭವಗಿಡ ಈ ಎಲ್ಲ ಗಿಡಗಳ ರಸ ತೆಗೆದುಕೊಂಡು ಸೇರಿಸಬೇಕು ಮತ್ತೆ ಇದಕ್ಕೆ ಕ್ರಾಮುಕ ಎಂಬ ಗಿಡದ ಬೇರು, ಬಿಲ್ವಪತ್ರಿಕಾಯಿ, ಕುದುರೆಯ ಬೆನ್ನಮೇಲಿನ ಮಿನಿಯ ಕೂದಲು, ಆಕಳಿನ ಕೂದಲು, ತೆಂಗಿನ ನಾರು, ಬೇಕಾದಷ್ಟು ಒಣಹೊಟ್ಟು, ಒಣಹೊಟ್ಟಿನ ಎರಡರಷ್ಟು ಪ್ರಮಾಣದ ಜಿಗುಟಾದ ಬಿಳಿಮಣ್ಣು ಈ ಮಣ್ಣಿನ ಅರ್ಧದಷ್ಟು ಜಿನುಗಾದ ಉಸುಕು ಕೆಲವು ಹತ್ತಿಯಂತಹ ವಸ್ತುಗಳನ್ನು ಸೇರಿಸಿ ಚೆನ್ನಾಗಿ ಅರೆದು ಮಂದ ಮಿಶ್ರಣ ಮಾಡಿ ಈಗಾಗಲೇ ತಯಾರಿಸಿದ ಭಿತ್ತಿಗೆ ಲೇಪಿಸಬೇಕು. ಇದನ್ನು ಭಿತ್ತಿಯು ಸಮತಟ್ಟು ಆಗಿ ನುಣುಪುಗೊಳಿಸುವವರೆಗೂ ಲೇಪಿಸುತ್ತಿರಬೇಕು ಎನ್ನುತ್ತದೆ.

**ವಿಧಾನ ೩:** ಸ್ವಚ್ಛವಾದ, ಸೂಕ್ಷ್ಮವಾದ, ಕಲ್ಲುಹರಳುಗಳಿಂದ ಮುಕ್ತವಾದ ಮಣ್ಣನ್ನು (ಬಿಳಿ) ತಗೆದುಕೊಂಡು ಆದಕ್ಕೆ ಎರಡರಷ್ಟು ಪ್ರಮಾಣದ ಸೂಕ್ಷ್ಮ ಮರಳನ್ನು ಸೇರಿಸಬೇಕು. ಇದಕ್ಕೆ ಶಾಲ್ಮಲಗಿಡ, ಬಿಲ್ವಪತ್ರಿಕಾಯಿ, ಕಾಕುವ ಗಿಡ, ಇವುಗಳಿಂದ ಪಡೆದ ಜಿಗುಟಾದ ರಸವನ್ನು ತೆಗೆದುಕೊಂಡು ಮಿಶ್ರಮಾಡಬೇಕು. ಈ ಮಂದಮಿಶ್ರಣವನ್ನು ಭಿತ್ತಿನುಣುಪಾಗುವವರೆಗೂ ಲೇಪಿಸುತ್ತಿರಬೇಕು ಎಂದು ಹೇಳಿದೆ.

**ಹಿನ್ನೆಲೆ ಲೇಪನ ಹಂತ:**

ಭಿತ್ತಿಸಿದ್ಧತೆಯು ಪೂರ್ಣವಾಗಬೇಕಾದರೆ ಹಿನ್ನೆಲೆ ಲೇಪನ ಕಾರ್ಯ ಮುಗಿದಾಗಲೇ ಎನ್ನಬಹುದು. ಸಮರಾಂಗಣ ಸೂತ್ರ, ಶಿಲ್ಪರತ್ನ, ವಿಷ್ಣುಧರ್ಮೋತ್ತರ ಹಾಗೂ ಮಾನಸೋಲ್ಲಾಸ ಗ್ರಂಥಗಳು ಹಿನ್ನೆಲೆ ಲೇಪನದ ಕುರಿತು ಹೇಳಿವೆ. ಸಮರಾಂಗಣಸೂತ್ರದಲ್ಲಿ ಹಿನ್ನೆಲೆ ಲೇಪನ ಕುರಿತು ಒಂದು ಅಧ್ಯಾಯವನ್ನೇ ಮೀಸಲಿರಿಸಿದೆ. ಈ ಅಧ್ಯಾಯದಲ್ಲಿ ಹಿನ್ನೆಲೆಯ ಲೇಪನವನ್ನು ಮಾಡಲು ಬಿಳಿಯ ಮಣ್ಣನ್ನು ನಿರ್ದಿಷ್ಟ ಸ್ಥಳಗಳಿಂದ ಅಂದರೆ ನದಿದಂಡೆ, ಕಮಲದ ಹೂವಿನ ಕೊಳದ ದಂಡೆ, ಪರ್ವತ ಪ್ರದೇಶಗಳಿಂದ ತೆಗೆದುಕೊಂಡು ಅದರಲ್ಲಿ ಕಲ್ಲು-ಹರಳು ಇರದಂತೆ ಚೆನ್ನಾಗಿ ಸೋಸಿ ಅದಕ್ಕೆ ಜಿಪ್ಸಮ್ ಅಥವಾ ಮಾರ್ಬಲ್ ಪುಡಿಯನ್ನು ಸೋಸಿ ಕೂಡಿಸಬೇಕು. ಅದಕ್ಕೆ ಕಲ್ಲುಸಕ್ಕರೆಯ ಪುಡಿಯನ್ನು ಬೆರೆಸಿಕೊಂಡು ಚೆನ್ನಾಗಿ ಕಲಸಿಕೊಳ್ಳಬೇಕು. ಈ ಮಿಶ್ರಣಕ್ಕೆ ಸ್ವಲ್ಪ ನೀರು ನಂತರ ಶಾಲ್ಮಲಗಿಡ, ಅಶೋಕಗಿಡ, ಕಾಕುಭಗಿಡ, ತ್ರಿಪಲೋದ್ಭವಗಿಡ, ಈ ಎಲ್ಲ ಗಿಡಗಳಿಂದ ಸಂಗ್ರಹಿಸಿದ ಅಂಟನ್ನು ಹಾಕಿ ಮಿಶ್ರಣ ಮಾಡಬೇಕು.

ಮಂದವಾದ ಮಿಶ್ರಣಕ್ಕೆ ಬೆಣ್ಣೆಯ ಹಾಗಿರುವ ಸುಣ್ಣವನ್ನು ಹಾಕಿ ಚೆನ್ನಾಗಿ ಕಲಸಿಕೊಳ್ಳಬೇಕು. ಆಮೇಲೆ ಇದಕ್ಕೆ ಜೇನುಮೇಣವನ್ನು ಸೇರಿಸಿ ಕಲಸಿಕೊಂಡು ಕುಂಚಗಳ ಸಹಾಯದಿಂದ ಭಿತ್ತಿಗೆ ಲೇಪಿಸಬೇಕು ಎಂದು ಹೇಳುತ್ತದೆ.[೨೨]

ಶಿಲ್ಪರತ್ನವು ಎರಡು ರೀತಿಯ ಹಿನ್ನೆಲೆ ಲೇಪನದ ಕುರಿತು ಹೇಳಿದೆ

೧. ಟೆಂಪರಾ ವಿಧಾನ

೨. ಫ್ರೆಸ್ಕೋ ವಿಧಾನ (ಫ್ರೆಸ್ಕೋ ಸೆಕ್ಕೋ ವಿಧಾನ)

**ಟೆಂಪರಾ ವಿಧಾನ:**

ಗೋಡೆಯ ಮೇಲೆ ಹಾಕಿದ ಗಾರೆ ಒಣಗಿದ ಮೇಲೆ ಚಿತ್ರ ಬರೆಯುವ ಪದ್ಧತಿ ಇದಾಗಿದ್ದು, ಇದಕ್ಕೆ ಹಿನ್ನೆಲೆ ಲೇಪನವನ್ನು ಮಾಡಿಕೊಳ್ಳಲು ವಜ್ರಲೇಪ, ಬಿಳಿಕಲ್ಲಿನ ಪುಡಿ, ಸುಣ್ಣ, ಶಂಖಚೂರ್ಣ, ಬಿಳಿಮಣ್ಣು, ಜಿಪ್ಸಮ್ ಇವುಗಳನ್ನು ಸೇರಿಸಿಕೊಂಡು ಸಿದ್ಧಪಡಿಸಿದ ಲೇಪನವನ್ನು ಹಿನ್ನೆಲೆಯಾಗಿ ಲೇಪಿಸುವುದು ಟೆಂಪರಾ ವಿಧಾನಕ್ಕೆ ಬಳಸುವುದಾಗಿದೆ.

**ಫ್ರೆಸ್ಕೋ ಸೆಕ್ಕೋ ವಿಧಾನ:**

ಗೋಡೆಯ ಮೇಲೆ ಹಾಕಿದ ಗಾರೆ ಹಸಿ ಇರುವಾಗಲೇ ಚಿತ್ರ ಬರೆಯುವ ಪದ್ಧತಿ ಇದಾಗಿದ್ದು, ಇದಕ್ಕೆ ಹಿನ್ನೆಲೆ ಲೇಪನವನ್ನು ಮಾಡಲು ಅತ್ಯಲ್ಪ ಪ್ರಮಾಣದ ಮರದ ಅಂಟನ್ನು ಹೆಚ್ಚಿನ ಭಾಗದ ಸುಣ್ಣದಲ್ಲಿ ಸೇರಿಸಿ ಹಲವಾರು ಸಲ ಪದರ ಪದರವಾಗಿ ಹಿನ್ನೆಲೆ ಲೇಪಿಸುವುದು. ಫ್ರೆಸ್ಕೋ-ಸೆಕ್ಕೋ ವಿಧಾನದ ಹಿನ್ನೆಲೆ ಲೇಪನ ವಿಧಾನವಾಗಿದೆ. ಈ ಗ್ರಂಥವು ಸುಣ್ಣದೊಡನೆ ಮಿಶ್ರ ಮಾಡಲು ಬೇಲದಕಾಯಿಯ ಅಂಟನ್ನು ಮತ್ತು ನಿಂಬೆಯಗಿಡದ ರಸವನ್ನು ಹೇಳುತ್ತದೆ ಹಾಗೂ ಹಿನ್ನೆಲೆ ಲೇಪನವನ್ನು ಸಪೋಟಾಗಿಡದಿಂದ ರಚಿಸಲಾದ ನಾರಿನ ಕುಂಚದಿಂದ ಇಲ್ಲವೇ ಕೇತಕಿಗಿಡದಿಂದ ರೂಪಿತಗೊಂಡ ಕುಂಚದಿಂದ ಲೇಪಿಸಲು ಹೇಳಿದೆ.

ಒಟ್ಟಾರೆಯಾಗಿ ಹಿನ್ನೆಲೆ ಲೇಪನಕ್ಕೆ ಬಿಳಿಯ ಮಣ್ಣು, ಸುಣ್ಣ, ನೀಲಗಿರಿ ಪರ್ವತದಲ್ಲಿ ದೊರೆಯುವ ಬಿಳಿದಾದ ಕಲ್ಲು, ಮಾರ್ಬಲ್ , ಕೋಲಿನ್ ಮತ್ತು ಜಿಪ್ಸಮ್‌ಗಳನ್ನು ತೆಗೆದುಕೊಂಡು ಇವುಗಳ ಜೊತೆಗೆ ಮಿಶ್ರಣ ಮಾಡಲು ವಜ್ರಲೇಪ, ಮರದ ಅಂಟು, ವಿವಿಧ ಗಿಡದ ರಸಗಳನ್ನು ಅಂಟುಮಾಧ್ಯಮವಾಗಿ ಬಳಸಿದ ವಿವರಗಳು ತಿಳಿದುಬರುತ್ತದೆ. ಸಾಮಾನ್ಯವಾಗಿ ಹಿನ್ನೆಲೆ ಲೇಪನವು ಬಿಳಿಯ ವರ್ಣಕ್ಕಾಗಿರುವುದೇ

---

೨೨. ಡಾ.ಯಾದಪ್ಪ ಪರದೇಶಿ: "ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ", ಪು.೭೧.

ಆದರೂ ಹಲವು ಸಂದರ್ಭಗಳಲ್ಲಿ ತಳಹಳದಿ, ತಿಳಿಕೆಂಪು, ನಸುಗೆಂಪು ಅಥವಾ ಕಂದುಗೆಂಪು ಹೀಗೆ ವಿವಿಧ ವರ್ಣಛಾಯೆಗಳಿಂದ ಕೂಡಿರುವುದೂ ಕಂಡುಬರುತ್ತವೆ. ಕಲಾವಿದರ ಅಭಿರುಚಿಯನ್ನು ಅವಲಂಬಿಸಿ ಇದು ನಿರ್ಧಾರವಾಗುವುದು ಗುಳೇದಗುಡ್ಡದ ಹೊಸಮನಿಗೌಡರ ಮನೆಯ ಭಿತ್ತಿಚಿತ್ರಗಳಲ್ಲಿ ಹಿನ್ನೆಲೆ ಲೇಪನವು ಬೂದುವರ್ಣದ್ದಾಗಿದ್ದರೆ ನಿಪ್ಪಾಣಿಯ ರಾಜವಾಡೆಯಲ್ಲಿನ ಭಿತ್ತಿಯ ಹಿನ್ನೆಲೆಯು ಕಂದುಗೆಂಪುವರ್ಣದಿಂದ ಕೂಡಿದೆ.

ಹೀಗೆ ಭಿತ್ತಿ ಸಿದ್ಧತೆಗೊಳಿಸುವಲ್ಲಿ ಈ ಮೇಲಿನ ನಾಲ್ಕು ಹಂತಗಳು ಪ್ರಮುಖವಾಗಿದ್ದು. ಇನ್ನು ಮುಂದೆ ಭಿತ್ತಿಚಿತ್ರರಚಿಸುವಲ್ಲಿ ಚಿತ್ರಕಲೆಯ ಪರಿಕರಗಳ ಅಧ್ಯಯನವೂ ಅಷ್ಟೇ ಮುಖ್ಯವಾಗಿದ್ದು ಅವುಗಳ ಕುರಿತು ಸ್ಥೂಲವಾಗಿ ವಿವೇಚಿಸಲಾಗಿದೆ.

**ಭಿತ್ತಿ ಚಿತ್ರಕಲೆಯ ಪರಿಕರಗಳು:**

ಈ ಭಿತ್ತಿ ಚಿತ್ರಪರಿಕರಗಳಲ್ಲಿ ೧. ಆಧಾರ ಪರಿಕರ, ೨.ಸಂಸ್ಕರಣ ಪರಿಕರ, ೩.ನಿರ್ಮಾಣ ಪರಿಕರ ೪. ಬಣ್ಣಗಳು, ೫. ವರ್ತಿಕಾ ೬. ಕುಂಚಗಳು ಇವು ಮುಖ್ಯವಾಗಿ ಬೇಕಾಗಿರುವವು ಎಂಬುದು ಕಂಡುಬರುತ್ತದೆ.[೨೩]

**ಆಧಾರ (ಮಾಧ್ಯಮ) ಪರಿಕರಗಳು:**

ಶಿಲೆ, ಮಣ್ಣು, ಮರ, ಲೋಹ, ಗಾಜು ಮತ್ತು ಗಾರೆ ಮೇಲೆ ಚಿತ್ರರಚನೆ ಮಾಡುವುದರಿಂದ ಇವುಗಳನ್ನು ಆಧಾರ ಅಥವಾ ಮಾಧ್ಯಮ ಪರಿಕರಗಳೆಂದು ಕರೆಯುವರು.

**ಸಂಸ್ಕರಣ ಪರಿಕರಗಳು:**

ಆಧಾರಕ್ಕೆ ಮಿಶ್ರಣ ಲೇಪಿಸುವ ಮೊದಲು ಆಧಾರ (ಮಾಧ್ಯಮ)ವನ್ನು ಯೋಗ್ಯವಿಧಾನಗಳಿಂದ ಸಂಸ್ಕರಿಸಿ ಮಿಶ್ರಣ ಲೇಪಿಸಬೇಕಾಗುತ್ತದೆ. ಗೋಡೆಗೆ ಸುಣ್ಣದ ನೀರು ಹಾಕಿ ನಂತರ ತಣ್ಣೀರಿನಿಂದ ಎರಚಿ ಸಂಸ್ಕರಿಸಬೇಕೆಂದು "ಸಮರಾಂಗಣ ಸೂತ್ರ"ದಲ್ಲಿ ತಿಳಿಸಲಾಗಿದೆ.

**ಭಿತ್ತಿ ನಿರ್ಮಾಣ ಪರಿಕರದಲ್ಲಿ:**

ಭಿತ್ತಿ ನಿರ್ಮಾಣ ಮಾಡಲು ಬಳಸುವ ಪರಿಕರದಲ್ಲಿ ಮತ್ತೆ ಮೂರು ವಿಭಾಗಗಳನ್ನು ಮಾಡಲಾಗಿದೆ. ೧. ಮಿಶ್ರಣ ಪರಿಕರ ೨. ಬಂಧಕ ಪರಿಕರ ೩. ಲೇಪಿಸುವ ಪರಿಕರವೆಂದು ಗುರುತಿಸಲಾಗಿದೆ.

---

೨೩. ಡಾ.ಯಾದಪ್ಪ ಪರದೇಶಿ: "ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ", ಪು. ೮೧.

**ಮಿಶ್ರಣ ಪರಿಕರ:**

ಆಧಾರ (ಮಾಧ್ಯಮ)ವನ್ನು ಸಂಸ್ಕರಿಸಿದನಂತರ ಮಿಶ್ರಣ ಲೇಪಿಸಲಾಗುತ್ತದೆ. ಈ ಮಿಶ್ರಣ ತಯಾರಿಸಲು ಮಣ್ಣು, ಕಲ್ಲಿನಪುಡಿ, ಸುಣ್ಣ ಉಸುಕು, ನಾರು ಪದಾರ್ಥ, ಶಂಖಚೂರ್ಣ, ಇಟ್ಟಿಗೆಪುಡಿಯಂತಹ ವಸ್ತುಗಳು ಬೇಕಾಗುತ್ತಿದ್ದು ಇವುಗಳನ್ನು ಮಿಶ್ರಣ ಪರಿಕರಗಳೆಂದು ಕರೆಯಲಾಗಿದೆ.[೨೪]

**ಮಣ್ಣು:**

ಭಿತ್ತಿ ನಿರ್ಮಾಣಕ್ಕೆ ಬಳಸುವ ಪರಿಕರಗಳಲ್ಲಿ ಮಣ್ಣು ಪ್ರಮುಖವಾದುದು ಪ್ರಾರಂಭದ ದಿನಗಳಿಂದ ಮಧ್ಯಯುಗದವರೆಗೂ ಸಾಮಾನ್ಯವಾಗಿ ಮಣ್ಣಿನ ಭಿತ್ತಿಯನ್ನೇ ಬಳಸಿಕೊಂಡಿದ್ದು ಮಣ್ಣನ್ನು ಹದವಾಗಿ ಕಲಿಸಿಕೊಂಡು ಗೋಡೆಗೆ ಲೇಪಿಸಿ ಚಿತ್ರರಚನೆ ಮಾಡಿರುವುದು ಕಂಡುಬರುತ್ತದೆ. ಭೂಮಿಯ ಗುಣಕ್ಕನುಸಾರವಾಗಿ ಮಣ್ಣಿನ ಬಣ್ಣ, ಸ್ವರೂಪ, ಜಿಗುಟುತನವಿರುವ ಗುಣಗಳು ಪ್ರದೇಶದಿಂದ ಪ್ರದೇಶಕ್ಕೆ ಬೇರೆಬೇರೆಯಾಗಿರುತ್ತದೆ. ಆದರೆ ಭಿತ್ತಿ ನಿರ್ಮಾಣದಲ್ಲಿ ಜಿಗುಟಾದ ಮಣ್ಣನ್ನು ಬಳಸಬೇಕೆಂಬುದು ಗಮನಾರ್ಹ. ಅಜಂತಾ ಭಿತ್ತಿ ನಿರ್ಮಾಣದಲ್ಲಿ "Ferruginous" ಎಂಬ ಮಣ್ಣನ್ನು ಬಳಸಲಾಗಿದೆ. ವಿಷ್ಣುಧರ್ಮೋತ್ತರ ಮತ್ತು ಸಮರಾಂಗಣಸೂತ್ರಧಾರ ಗ್ರಂಥಗಳು ಭಿತ್ತಿ ನಿರ್ಮಾಣದಲ್ಲಿ ಬಳಸುವ ಪರಿಕರಗಳಲ್ಲಿ ಮಣ್ಣನ್ನು ಪ್ರಮುಖವಾಗಿ ಹೇಳಿವೆ. "ವಿಷ್ಣುಧರ್ಮೋತ್ತರ'ದಲ್ಲಿ ಮಿಶ್ರಣ ಲೇಪಣಕ್ಕೆ ಜಿಗುಟಾದ ಮಣ್ಣನ್ನು ಭಿತ್ತಿಯನ್ನು ನುಣುಪುಗೊಳಿಸಲು ಅತ್ಯಂತ ಸೂಕ್ಷ್ಮವಾದ ಮಣ್ಣನ್ನು ಅಂಟಿನ ಜೊತೆ ಕಲಿಸಿ ಲೇಪಿಸಲು ತಿಳಿಸುತ್ತದೆ. "ಸಮರಾಂಗಣ ಸೂತ್ರಧಾರ"ವು ಮೊದಲ ಹಂತದ ಮಿಶ್ರಣದಲ್ಲಿ ಜಿಗುಟುಮಣ್ಣನ್ನು ಬಳಸಲು ಹೇಳಿ ನಂತರ ಭಿತ್ತಿಯನ್ನು ನುಣುಪುಗೊಳಿಸಲು ಕಮಲದ ಹೂವಿನ ಕೊಳದ ದಂಡೆಯ ಮಣ್ಣು. ಭೂಮಿಯ ಬಿಳಿಯ ಮಣ್ಣು, ಗಿಡದ ಬೇರಿನ ಕೆಳಗಿನ ಮಣ್ಣು, ನದಿ ತೀರದ ಮಣ್ಣು, ಇರುವೆಹುತ್ತದ ಮಣ್ಣುಗಳನ್ನು ಲೇಪಿಸಲು ಹೇಳುತ್ತದೆ. "ಮಾನಸೋಲ್ಲಾಸವು" ಬಿಳಿಯ ಮಣ್ಣನ್ನು ಭಿತ್ತಿನಿರ್ಮಾಣದಲ್ಲಿ ಬಳಸಲು ಸೂಚಿಸಿದರೆ, "ಕಾಶ್ಯಪಶಿಲ್ಪಶಾಸ್ತ್ರವು"ಜಾಂಗಲ ಅನುರೂಪ, ಸಮ್ಮಿಶ್ರ ಎಂಬ ಮೂರು ಬಗೆಯ ಮಣ್ಣುಗಳನ್ನು ಹೆಸರಿಸುತ್ತದೆ. ಕಾಶ್ಯಪ ಶಿಲ್ಪಶಾಸ್ತ್ರವು ಇನ್ನೊಂದು ಕಡೆಗೆ ಈಗಾಗಲೇ ಲೇಪಿಸಿದ ಮಣ್ಣಿನ ಮಿಶ್ರಣ ನುಣುಪಾಗಿ ಮಾಡಲು ಜಿಗುಟಾದ ನುಣುಪಾದ ಮಣ್ಣಿನ ಕುರಿತು ಹೇಳುತ್ತ ಆದನ್ನು ಪಡೆಯುವ ಸ್ಥಳಗಳನ್ನು ಹೇಳಿದೆ. ಪರ್ವತ, ನದಿ, ಗದ್ದೆ, ಸಮುದ್ರ, ನೀರು ಬತ್ತಿ ಹೋಗಿರುವ ಸ್ಥಳದ ಮಣ್ಣು ಆನೆಯ ದಂತವು ಸೋಕಿರುವ ಭೂಮಿಯ ಮಣ್ಣು, ಹಸುವಿನ ಕೋಡು ಸೋಕಿರುವ ಭೂಮಿಯ ಮಣ್ಣು, ಸರೋವರದ ತಳದಿಂದ ತೆಗೆದುಕೊಳ್ಳಲಾದ ಮಣ್ಣುಗಳನ್ನು ಬಳಸಬೇಕೆಂದು ಹೇಳುತ್ತದೆ. ಈ ರೀತಿಯಾಗಿ ಪ್ರಾಚೀನ ಕಾಲದಿಂದಲೇ ಮಣ್ಣನ್ನು ಭಿತ್ತಿ ನಿಮಾಣದಲ್ಲಿ ಹೀಗೆ ಬಳಸುತ್ತಿದ್ದುದು ಕಂಡುಬರುತ್ತದೆ.

---

೨೪. ಡಾ.ಯಾದಪ್ಪ ಪರದೇಶಿ: "ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ", ಪು.೮೩.

ಉತ್ತರ ಕರ್ನಾಟಕದಲ್ಲಿ ನಿಪ್ಪಾಣಿಯ ರಾಜವಾಡೆ, ಹಳಿಯಾಳದ ಹತ್ತಿರವಿರುವ ಬಂಜರ ಕಂಚನಹಳ್ಳಿಯ ರಾಮದೇವಾಲಯಗಳಲ್ಲಿ ಹಾಗೂ ಗುಳೇದಗುಡ್ಡದ ಹೊಸಮನಿ ಗೌಡರ ಮನೆಯಲ್ಲಿಯ ಭಿತ್ತಿನಿರ್ಮಾಣಗಳಲ್ಲಿ ಪ್ರಮುಖವಾಗಿ ಮಣ್ಣನ್ನೇ ಬಳಸಿರುವುದು ಕಂಡುಬರುತ್ತದೆ. ಜನಪದ ಭಿತ್ತಿಚಿತ್ರಕಲೆಯ ರಚನೆಗೊಂಡು ಮಣ್ಣು ಪ್ರಮುಖವಾದ ವಸ್ತುವಾಗಿರುವುದು ಕಂಡುಬರುತ್ತದೆ.[೨೫]

**ಕಲ್ಲಿನಪುಡಿ:**

ಪ್ರಾಚೀನ ಕಾಲದಿಂದಲೇ ಭಿತ್ತಿನಿರ್ಮಾಣದಲ್ಲಿ ಕಲ್ಲಿನಪುಡಿಯನ್ನು ಬಳಸಿದ್ದು ಶಿಲ್ಪಶಾಸ್ತ್ರಗಳು ಹೇಳುತ್ತವೆ. ಕಲ್ಲಿನಪುಡಿಯನ್ನು ಅತ್ಯಂತ ನುಣುಪಾಗಿ ಕುಟ್ಟಿಕೊಂಡು ಬಳಸಿರುವುದು ಕಂಡುಬರುತ್ತದೆ. ಅಜಂತಾದ ಭಿತ್ತಿಯಲ್ಲಿ ಕಲ್ಲಿನ ಪುಡಿ ಬಳಕೆಯಾಗಿರುವುದು ಕಂಡುಕೊಳ್ಳಲಾಗಿದೆ. "ಮಾನಸೋಲ್ಲಾಸ"ವು ನೀಲಗಿರಿ ಪರ್ವತದಲ್ಲಿ ದೊರೆಯುವ ಬಿಳಿದಾದ ಕಲ್ಲನ್ನು ಕುಟ್ಟಿ ಪುಡಿಮಾಡಿ ಭಿತ್ತಿರಚನೆಯಲ್ಲಿ ಬಳಸಬೇಕೆಂದು ಹೇಳುತ್ತದೆ. ಭಿತ್ತಿ ನಿರ್ಮಾಣದಲ್ಲಿ ಶಿಲ್ಪಶಾಸ್ತ್ರಗಳು ಹೇಳಿದಂತೆ, ಬಿಳಿಕಲ್ಲಿನ ಪುಡಿಯನ್ನು ಬಳಸಿದ್ದು ಇದು ಕೋಲಿನ್, ಜಿಪ್ಸಮ್ ಮತ್ತು ಮಾರ್ಬಲ್ ಕಲ್ಲಿನಪುಡಿಗಳಾಗಿರಬೇಕೆಂದು ಇಂದಿನ ವಿದ್ವಾಂಸರು ಅಭಿಪ್ರಾಯಪಡುತ್ತಾರೆ.

ಉತ್ತರ ಕರ್ನಾಟಕದಲ್ಲಿ ನರಗುಂದದ ಅರಮನೆ, ಹಂಪಿಯ ವಿರುಪಾಕ್ಷ ದೇವಾಲಯ, ರಾಯಚೂರಿನ ಖಾಜಿನಗೌಡರ ಮನೆಯಲ್ಲಿಯ ಭಿತ್ತಿಯನ್ನು ಗಮನಿಸಬಹುದಾಗಿದೆ. ವಿಷ್ಣುಧರ್ಮೋತ್ತರವು ಚಕಮುಖಿಕಲ್ಲನ್ನು ಕುಟ್ಟಿ ಪುಡಿಮಾಡಿ ಮಿಶ್ರಣದಲ್ಲಿ ಸೇರಿಸಿ ಭಿತ್ತಿನಿರ್ಮಾಣ ಮಾಡಲು ತಿಳಿಸಿದ್ದು ಕಲ್ಲಿನ ಪುಡಿಯನ್ನು ಮಿಶ್ರಣದಲ್ಲಿ ಸೇರಿಸುವುದರಿಂದ ಭಿತ್ತಿಗೆ ದೃಢತೆ ಬರುತ್ತದೆ ಎನ್ನುತ್ತದೆ.

**ಉಸುಕು:**

ಭಿತ್ತಿ ನಿರ್ಮಾಣದಲ್ಲಿ ಬಳಸಲ್ಪಡುವ ಮುಖ್ಯ ಪರಿಕರಗಳಲ್ಲಿ ಉಸುಕು ಒಂದಾಗಿದೆ. ಮಣ್ಣಿನಭಿತ್ತಿ ಹಾಗೂ ಗಾರೆಭಿತ್ತಿಗಳೆರೆಡರಲ್ಲೂ ಉಸುಕು ಬಳಸಲ್ಪಡುತ್ತದೆ. ಹಲವಾರು ಗ್ರಂಥಶಾಸ್ತ್ರಗಳು ಉಸುಕನ್ನು ಬಳಸಲು ಹೇಳಿದ್ದು ಉಸುಕನ್ನು ಮೊದಲ ಹಂತದ ಲೇಪನದಲ್ಲಿ ಹೆಸರಿಸದೆ ಎರಡನೇ ಹಂತದ ಲೇಪನದಲ್ಲಿ ಬಳಸಲು ತಿಳಿಸಿವೆ. ಭಿತ್ತಿಚಿತ್ರಗಳಲ್ಲಿ ಉಸುಕು ಬಳಸಲ್ಪಟ್ಟ ಬಗ್ಗೆ ರಾಸಾಯನಿಕ ಪ್ರಯೋಗಗಳಿಂದಲೂ ಕಂಡುಕೊಳ್ಳಲಾಗಿದೆ. ಇಂದಿಗೂ ಕೂಡಾ ಭಿತ್ತಿ ನಿರ್ಮಾಣದಲ್ಲಿ ಉಸುಕು ಪ್ರಮುಖ ಪಾತ್ರ ವಹಿಸುತ್ತದೆ.[೨೬]

**ಸುಣ್ಣ:**

ಭಿತ್ತಿ ನಿರ್ಮಾಣದಲ್ಲಿ ಸುಣ್ಣವು ಅವಶ್ಯವಾಗಿ ಬೇಕಾಗುವ ಪರಿಕರವಾಗಿದೆ. ಭಿತ್ತಿನಿರ್ಮಾಣದ ಮೊದಲ ಹಂತದಲ್ಲಿಯ ಮಿಶ್ರಣದಿಂದ ಪ್ರಾರಂಭವಾಗಿ ಭಿತ್ತಿ ನುಣುಪುಗೊಳಿಸಿ, ಹಿನ್ನೆಲೆ ಲೇಪಿಸುವವರೆಗಿನ ವಿವಿಧ

---

೨೫. ಡಾ.ಯಾದಪ್ಪ ಪರದೇಶಿ: "ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ", ಪು.೮೪.

೨೬. ಪ್ರೋ ಎಂ.ಎಚ್.ಕೃಷ್ಣಯ್ಯ: "ಶೃಂಗಾರ ಲಹರಿ", ಪು.೪೫.

ಹಂತಗಳಲ್ಲಿ ಸುಣ್ಣವು ಬಳಕೆಯಾಗುತ್ತದೆ. "ವಿಷ್ಣುಧರ್ಮೋತ್ತರವು" ಸುಣ್ಣವನ್ನು ಬೆಂಕಿಯಲ್ಲಿ ಸುಟ್ಟು, ಕುಟ್ಟಿ, ಪುಡಿಮಾಡಿ ಭಿತ್ತಿ ತಯಾರಿಕೆಯಲ್ಲಿ ಬಳಸಬೇಕೆಂದು ಹೇಳುತ್ತದೆ. "ಸಮರಾಂಗಣ ಸೂತ್ರಧಾರವು" ನುಣುಪಾದ ಪರಿಶುದ್ಧವಾದ ಅತ್ಯಂತ ಬಿಳಿಯದಾದ ಸುಣ್ಣದಕಲ್ಲನ್ನು ತೆಗೆದುಕೊಂಡು ಕುಟ್ಟಿಪುಡಿಮಾಡಿ ಅದಕ್ಕೆ ಅಕ್ಕಿಗಂಜಿ ಸೇರಿಸಿ ಭಿತ್ತಿಗೆ ಲೇಪಿಸಬೇಕೆನ್ನುವ ವಿವರಕೊಟ್ಟಿದೆ. "ಸುಧಾಲೇಪವಿಧ"ವು ಒಣದಾದ ಭಿತ್ತಿಯ ಮೇಲೆ (Fresco-secco) ಚಿತ್ರ ರಚನೆ ಮಾಡಬೇಕಾದ ವಿಧಾನದಲ್ಲಿ ನಿರ್ಮಿಸುವ ಭಿತ್ತಿಗೆ ಮತ್ತು ಚಿತ್ರರಚನೆಗೆ ಕುದಿಸಿದ ಸುಣ್ಣವನ್ನು ಬಳಸಬೇಕೆಂಬುದನ್ನು ಹೇಳುತ್ತದೆ.

**ನಾರು ಪದಾರ್ಥ:**

ಈ ನಾರು ಪದಾರ್ಥವು ಭಿತ್ತಿಯು ಕಳಚಿ ಬೀಳದಂತೆ ಹಿಡಿದುಕೊಳ್ಳಲು ಸಹಾಯ ಮಾಡುತ್ತದೆ. ಒಣಹುಲ್ಲು, ಕೂದಲು, ಟೆಂಗಿನ ನಾರು, ಹತ್ತಿಗಳನ್ನು ಮಿಶ್ರಣಲೇಪನದಲ್ಲಿ ನಾರು ಪದಾರ್ಥಗಳಾಗಿ ಬಳಸಲು ಶಾಸ್ತ್ರಗ್ರಂಥಗಳು ಹೇಳುತ್ತವೆ. "ಸಮರಾಂಗಣಸೂತ್ರ"ವು– ಕುದುರೆ ಬಾಲದ ಕೂದಲು, ಆಕಳ ಬಾಲದ ಕೂದಲು, ಒಣಹುಲ್ಲು, ಹೊಟ್ಟು ಹತ್ತಿ, ಟೆಂಗಿನ ನಾರುಗಳನ್ನು ಮಿಶ್ರಣದಲ್ಲಿ ಬೆರೆಸಲು ಹೇಳಿದೆ.

ಅಜಂತಾದಲ್ಲಿಯ ಭಿತ್ತಿಯಲ್ಲಿ ಹುಲ್ಲು ಮತ್ತು ಹೊಟ್ಟಿನಂತಹ ಸಸ್ಯಸಂಬಂಧೀ ನಾರಿನ ಅಂಶಗಳು ಕಂಡುಬಂದಿವೆ. ಉತ್ತರಕರ್ನಾಟಕದ ಗುಳೇದಗುಡ್ಡದ ಹೊಸಮನಿಗೌಡರ ಮನೆ, ನರಗುಂದದ ವೆಂಕಟೇಶ್ವರ ದೇವಾಲಯ, ನಿಪ್ಪಾಣಿಯ ರಾಜನವಾಡೆ, ಬಿ.ಕೆ.ಹಳ್ಳಿಯ ರಾಮದೇವಾಲಯಗಳ, ಭಿತ್ತಿಯಲ್ಲಿ ಒಣಹುಲ್ಲು, ಹೊಟ್ಟುಗಳಂತಹ ನಾರು ಪದಾರ್ಥಗಳನ್ನು ಭಿತ್ತಿ ನಿರ್ಮಾಣದ ಸಂದರ್ಭದಲ್ಲಿ ಬಳಸಿರುವುದು ಕಂಡುಬರುತ್ತದೆ. ಯಾವುದೇ ಮಿಶ್ರಣ ಬಿಗಿಯಾಗಿ ಹಾಗೂ ಗಟ್ಟಿಯಾಗಿ ಹಿಡಿದುಕೊಳ್ಳಲು ನಾರುಪದಾರ್ಥಗಳು ಅವಶ್ಯವೆನಿಸುತ್ತವೆ.

**ಶಂಖಚೂರ್ಣ:**

ಶಂಖಚೂರ್ಣವೆಂದರೆ ಶಂಖಗಳನ್ನು ಅರೆದು ಮಾಡಿದ ಪುಡಿಯಾಗಿದೆ. ಇದನ್ನು ಭಿತ್ತಿ ತಯಾರಿಕೆಯ ಮಿಶ್ರಣ ಪರಿಕರಗಳಲ್ಲಿ ಬಳಸಲಾಗುತ್ತದೆ. ಇದನ್ನು ವಜ್ರಲೇಪ ಮತ್ತು ಮರದಂಟುಗಳ ಜೊತೆಗೆ ಸೇರಿಸಿದಂತಹ ಬಂಧಕಗಳನ್ನು ಹೇಳಲಾಗುತ್ತದೆ. "ಮಾನಸೋಲ್ಲಾಸವು" ಭಿತ್ತಿ ನಿರ್ಮಾಣದ ಎರಡನೆಯ ಲೇಪನದಲ್ಲಿ ಕಪ್ಪೆಚಿಪ್ಪು ಮತ್ತು ಶಂಖಗಳನ್ನು ಕುಟ್ಟಿ ಪುಡಿಮಾಡಿ ವಜ್ರಲೇಪದೊಡನೆ ಬೆರೆಸಲು ಹೇಳಿದೆ. "ಶಿಲ್ಪರತ್ನವು" ಶಂಖ ಮತ್ತು ಕಪ್ಪೆಚಿಪ್ಪುಗಳನ್ನು ಬೆಂಕಿಯಲ್ಲಿ ಸುಟ್ಟು ನಂತರ ಕುಟ್ಟಿ ಪುಡಿಮಾಡಿ ಬಳಸಲು ಸೂಚಿಸುತ್ತದೆ. ಶಂಖಚೂರ್ಣದ ಬಳಕೆಯಿಂದ ಭಿತ್ತಿಲೇಪನದಲ್ಲಿ ದೃಢತೆಯ ಜೊತೆಗೆ ಮೃಧುತನವೂ ಹೆಚ್ಚಾಗುತ್ತದೆ.

**ಬಂಧಕ ಪರಿಕರಗಳು:**

ಭಿತ್ತಿರಚನೆಗಾಗಿ ಮಿಶ್ರಣತಯಾರಿಸಲು ವಿವಿಧ ಪರಿಕರಗಳ ಜೊತೆಗೆ ಯೋಗ್ಯವಾದ ಜಿಗುಟು ಪದಾರ್ಥಗಳು ಬೇಕಾಗುತ್ತವೆ. ಅಂತಹ ಜಿಗುಟು ಪದಾರ್ಥಗಳನ್ನು ಇಲ್ಲಿ ಬಂಧಕ ಪರಿಕರಗಳೆಂದು ಪರಿಗಣಿಸಲಾಗಿದೆ.

**ಬಂಧಕಗಳು:** ೧. ವಜ್ರಲೇಪ

೨. ಮರದ ಅಂಟು

೩. ವಿವಿಧ ಗಿಡದ ರಸಗಳು

೪. ಬಾಳೆಹಣ್ಣು

೫. ಕಾಕಂಬಿ (ಜೇನುಬೆಲ್ಲ)

**ವಜ್ರಲೇಪ:**

ಪ್ರಾಣಿಮೂಲದ ಬಂಧಕವಾದ ವಜ್ರಲೇಪವು ಭಿತ್ತಿತಯಾರಿಕೆಯಲ್ಲಿ ಬಳಸಲ್ಪಡುತ್ತಿದ್ದು, ಇದನ್ನು ಪ್ರಾಣಿಗಳ ಕೋಡು, ಚರ್ಮ, ಎಲುಬುಗಳಿಂದ ವಜ್ರಲೇಪವನ್ನು ತಯಾರಿಸಲಗುತ್ತದೆ. "ವಿಷ್ಣುಧರ್ಮೋತ್ತರವು" ವಜ್ರಲೇಪವನ್ನು ಗೂಳಿ ಮತ್ತು ಕೋಣದ ಕೋಡುಗಳಿಂದ ಹಾಗೂ ಆಡು, ಕೋಣ ಮತ್ತು ಆಕಳಿನ ಚರ್ಮದಿಂದ ತಯಾರಿಸಬೇಕೆಂದು ಹೇಳುತ್ತದೆ. "ಮಾನಸೋಲ್ಲಾಸ ಮತ್ತು ಶಿಲ್ಪರತ್ನ" ಗ್ರಂಥಗಳು ವಜ್ರಲೇಪವನ್ನು ಭಿತ್ತಿ ತಯಾರಿಕೆ ಮತ್ತು ವರ್ಣಲೇಪನದಲ್ಲಿಯೂ ಬಳಸಲು ತಿಳಿಸುತ್ತವೆ. ಈ ವಜ್ರಲೇಪವು ಅಜಂತಾ, ಎಲ್ಲೋರಾ ಭಿತ್ತಿಚಿತ್ರಗಳಲ್ಲಿ ಬಳಸಿಕೊಂಡಿರುವುದು ಕಂಡುಬರುತ್ತದೆ.

**ಮರದ ಅಂಟು:**

ಗಿಡಗಳಿಂದ ಪಡೆಯುವ ಅಂಟುಗಳು ಈ ಗುಂಪಿಗೆ ಸೇರುತ್ತಿದ್ದು ಗಿಡದ ಟೊಂಗೆಗಳಲ್ಲಿ ಸ್ವಾಭಾವಿಕವಾಗಿ ಇಲ್ಲವೇ ಟೊಂಗೆಗಳ ಭಾಗಕ್ಕೆ ಗಾಯಮಾಡಿ ಅದರಿಂದ ಅಂಟುವಸರುವಂತೆ ಮಾಡಲಾಗುತ್ತದೆ. ಅಲ್ಲದೇ ಬಿಲ್ವಪತ್ರಿಗಿಡದ ಕಾಯಿಯಂತಹ ಕೆಲವು ಗಿಡಗಳಿಂದ ಅಂಟುಗಳನ್ನು ಪಡೆಯಲಾಗುತ್ತದೆ."ಶಿಲ್ಪರತ್ನವು" ನಿಂಬೆಗಿಡ ಮತ್ತು ಬಿಲ್ವಪತ್ರಿ ಕಾಯಿಯಿಂದ ಅಂಟನನ್ನು ಪಡೆಯುವಂತೆ ಹೇಳುತ್ತದೆ. "ವಿಷ್ಣುಧರ್ಮೋತ್ತರ ಮತ್ತು ಸಮರಾಂಗಣ ಸೂತ್ರಧಾರವು" ಬಿಲ್ವಪತ್ರಿಕಾಯಿಯ ಅಂಟನ್ನು ಮಣ್ಣಿನ ಭಿತ್ತಿತಯಾರಿಕೆಯಲ್ಲಿ ಪ್ರಮುಖ ಬಂಧಕವಾಗಿತ್ತೆಂದು ಹೇಳುತ್ತದೆ. ಜೊತೆಗೆ ಗುಗ್ಗಳದ ಬಳಕೆಯ ಕುರಿತು ಹೇಳಿದೆ.[೨೭]

**ವಿವಿಧ ಗಿಡದ ರಸಗಳು:**

ಗಿಡದ ಕಾಂಡ, ಎಲೆ, ಹೂವು ಹಣ್ಣುಗಳನ್ನು ಜಜ್ಜಿ ರಸ ತೆಗೆದು ಅಂಟಿನಂತೆ ಶಾಸ್ತ್ರಗ್ರಂಥಗಳು ಹೇಳಿವೆ. "ವಿಷ್ಣುಧರ್ಮೋತ್ತರ ಹಾಗೂ ಸಮರಾಂಗಣ ಸೂತ್ರವು" ಕುಡ್ಡಲಿ, ಕಬ್ಬು, ಮಧುಕ, ಬೇವು, ತ್ರಿಫಲಾ, ಕಾಕುವ, ಶಾಲ್ಮಲಗಿಡ, ಅವರೆಬೀಜ, ಕ್ರಾಮುಕ ಗಿಡದ ಬೇರು ಸಾಲವೃಕ್ಷಗಳಿಂದ ಪಡೆದ

---

೨೭. ಡಾ.ಯಾದಪ್ಪ ಪರದೇಶಿ: "ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ", ಪು.೮೮

ರಸವನ್ನು ಭಿತ್ತಿ ತಯಾರಿಕೆಯಲ್ಲಿ ಬಳಸಲು ಹೇಳಿದೆ. "ಕಾಶ್ಯಪಶಿಲ್ಪಶಾಸ್ತ್ರವು"-ಬಿಲ್ವ ಪತ್ರಿಕಾಯಿ, ಗೋದಿ, ಉದ್ದು, ಅಗಸೆ ಬೀಜಗಳ ರಸ, ಗುಗ್ಗುಳ, ಶುಂಠಿ, ಕರಿಮೆಣಸುಗಳ ರಸಗಳನ್ನು ಅಂಟುಮಾಧ್ಯಮಗಳಾಗಿ ಬಳಸಲು ತಿಳಿಸಿದೆ.[೨೮]

**ಬಾಳೆಹಣ್ಣು:**

ಬಾಳೆಹಣ್ಣಿನ ಒಳಗಿನ ತಿರುಳನ್ನು ಬಂಧಕವಾಗಿ ಉಪಯೋಗಿಸಲು ಶಾಸ್ತ್ರಗ್ರಂಥಗಳು ಹೇಳಿವೆ. ಬಾಳೆಹಣ್ಣಿನ ಒಳಗಿನ ತಿರುಳನ್ನು ಜಿಗುಟು ಪದಾರ್ಥವಾಗಿ ಭಿತ್ತಿ ತಯಾರಿಕೆಯಲ್ಲಿ ಬಳಸಿಕೊಳ್ಳಲಾಗಿದೆ. "ಶಿಲ್ಪರತ್ನವು" ಬಾಳೆಹಣ್ಣಿನ ತಿರುಳನ್ನು ಬೆಂಕಿಯಲ್ಲಿ ಸುಟ್ಟು ಕಣಕದ ಹಾಗೆ ಮಾಡಿಕೊಂಡು ಮಿಶ್ರಣದ ೧/೪ ಭಾಗದಷ್ಟು ಇರುವಂತೆ ಬೆರೆಸಬೇಕೆಂದು ಹೇಳುತ್ತದೆ. "ಸುಧಾಲೇಪವು" ಇದೇ ವಿಧಾನವನ್ನು ಹೇಳಿದ್ದು ಕಂಡುಬರುತ್ತದೆ.

**ಕಾಕಂಬಿ (ಜೇನುಬೆಲ್ಲ):**

ಭಿತ್ತಿ ತಯಾರಿಕೆಯಲ್ಲಿ ಕಾಕಂಬಿಯನ್ನು ಬಂಧಕವಾಗಿ ಉಪಯೋಗಿಸಲು ಶಾಸ್ತ್ರಗ್ರಂಥಗಳು ಹೇಳಿವೆ. "ವಿಷ್ಣುಧರ್ಮೋತ್ತರವು" ಕಾಕಂಬಿಯನ್ನು ಇಟ್ಟಿಗೆ ಪುಡಿ, ಜೇಡಿಮಣ್ಣು ಮತ್ತು ಇತರ ವಸ್ತುಗಳೊಂದಿಗೆ ಮೊದಲ ಹಂತದ ಲೇಪನದಲ್ಲಿ ಬೆರೆಸಲು ಹೇಳುತ್ತದೆ. "ಶಿಲ್ಪರತ್ನವು" ಮೊದಲ ಲೇಪನದಲ್ಲಿ ಶಂಕಚೂರ್ಣ, ಮುದ್ಗರಸ ಬಾಳೆಹಣ್ಣಿನ ತಿರುಳು, ಉಸುಕಿನ ಜೊತೆ ಕಾಕಂಬಿಯನ್ನು ಸೇರಿಸಲು ಹೇಳಿದೆ, ಹಿನ್ನೆಲೆ ಲೇಪನಕ್ಕಿಂತ ಮೊದಲು ಭಿತ್ತಿ ನುಣುಪುಗೊಳಿಸಲು ಕಾಕಂಬಿಯ ನೀರಿನಿಂದ ಭಿತ್ತಿಯನ್ನು ಹಲವು ಬಾರಿ ತೊಳೆಯಲು ತಿಳಿಸುತ್ತದೆ.

**ಲೇಪಿಸುವ ಪರಿಕರಗಳು:**

ಭಿತ್ತಿ ಲೇಪನಕ್ಕೆ ಹದವಾಗಿ ಕಲಿಸಿಕೊಂಡ ಮಿಶ್ರಣವನ್ನು ಲೇಪಿಸಲು ಬೇಕಾಗುವ ಪರಿಕರಗಳನ್ನು ಲೇಪಿಸುವ ಪರಿಕರಗಳೆಂದು ವರ್ಗೀಕರಿಸಿಕೊಳ್ಳಲಾಗಿದೆ.

೧. ತ್ಯಾಪಿಗಳು

೨. ಪೊರಕೆಗಳು

೩. ಕಾಗದ

---

೨೮. ಡಾ.ಯಾದಪ್ಪ ಪರದೇಶಿ: "ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ", ಪು.೬೦

**ತ್ಯಾಪಿಗಳು:**

ಮಿಶ್ರಣ ಲೇಪಿಸಲು ಬಳಸುವ ತ್ಯಾಪಿಗಳು ಭಿತ್ತಿರಚನೆಗೆ ಪ್ರಮುಖ ಸಾಧನಗಳಾಗಿವೆ. "ಸುಧಾಲೇಪವಿಧ"ವು ತ್ಯಾಪಿಗಳು ಚಿಕ್ಕವು ದೊಡ್ಡದಾದುವು ಇರಬೇಕು. ಅವಶ್ಯಕತೆಗೆ ತಕ್ಕಂತೆ ವಿವಿಧ ವಿನ್ಯಾಸದಲ್ಲಿ ತ್ಯಾಪಿಗಳನ್ನು ರಚಿಸಿಕೊಂಡಿರಬೇಕು. ನುಣುಪಾದ ಮೈಹೊಂದಿದ್ದು ಹಿಡಿಕೆಯುಳ್ಳವಾಗಿರಬೇಕು. ಕಬ್ಬಿಣ, ಕಟ್ಟಿಗೆ, ಸೀಸ ಮತ್ತು ತವರಿನಿಂದ ಮಾಡಿದವುಗಳಾಗಿರಬೇಕು. ಅವಶ್ಯಕತೆಗಳಿಗೆ ತಕ್ಕಂತೆ ವಿವಿಧ ಆಳತೆ ಮತ್ತು ಶೈಲಿಯಲ್ಲಿರಬೇಕೆಂದು ತಿಳಿಸುತ್ತದೆ.

**ಪೊರಕೆಗಳು:**

ಜಿಗುಟು ಮಿಶ್ರಣವನ್ನು ತ್ಯಾಪಿಯಿಂದ ರಚಿಸಿದರೆ ಭಿತ್ತಿಯನ್ನು ನುಣುಪುಗೊಳಿಸಲು ಮಂದವಾದ ಗಂಜಿಯಂತಹ ಮಿಶ್ರಣ ಲೇಪಿಸಲು ಮತ್ತು ಹಿನ್ನೆಲೆ ಲೇಪಿಸಲು ಪೊರಕೆಯಂತಹ ಸಾಧನಗಳ ಅವಶ್ಯಕತೆ ಇದೆ. ಈ ಕುರಿತು "ಸುಧಾಲೇಪವು" "ಶಿಲ್ಪರತ್ನ" ಗ್ರಂಥವನ್ನೇ ಆಧಾರವಾಗಿಟ್ಟುಕೊಂಡು ರಚನೆ ಆಗಿದ್ದು ಇದರಲ್ಲಿ ಪೊರಕೆಯ ತುದಿಯನ್ನು ಸಮವಾಗಿ ಕತ್ತರಿಸಲಾಗಿದ್ದು ಹಿಡಿಕೆಗೆ ಭದ್ರವಾಗಿ ಬಂಧಿಸಿದಂತಹ ಟೆಂಗಿನ ನಾರಿನ ಸಾಧನಗಳನ್ನು ಉಪಯೋಗಿಸಬೇಕೆಂದು ಅವುಗಳ ಸ್ವರೂಪವನ್ನು ಹೇಳಲಾಗಿದೆ.

**ಕಾಗದ:**

ಕಾಗದವು ಚಿತ್ರರಚನಾ ಆಧಾರ ಪರಿಕರವಾದರೂ ಭಿತ್ತಿಚಿತ್ರರಚನೆಯಲ್ಲಿ ಇದನ್ನು ಗೋಡೆಗೆ ಲೇಪಿಸುವುದರಿಂದ, ಲೇಪಿಸುವ ಪರಿಕರದಲ್ಲಿ ಹೆಸರಿಸಲಾಗಿದೆ. ಭಾರತದಲ್ಲಿ ಕ್ರಿ.ಶ.೧೨೨೦ರ ಸುಮಾರಿಗೆ ಕಾಗದವು ಕಂಡು ಬಂದಿದ್ದು, ಮಹಮ್ಮದೀಯರ ಮೂಲಕ ಭಾರತಕ್ಕೆ ಕಾಗದವು ೧೪ನೇ ಶತಮಾನದಲ್ಲಿ ಕರ್ನಾಟಕಕ್ಕೆ ಬಂದಿತು. ಸುಲ್ತಾನರ ಡೆಕ್ಕನ್ ಅವಧಿಯಲ್ಲಿ ಕಾಗದವು ಬಳಕೆಯಲ್ಲಿ ಬಂದಿತು. ಭಿತ್ತಿ ಚಿತ್ರರಚನೆ ಮಾಡಬೇಕಾದಾಗ ಮೊದಲು ಕಾಗದದ ಮೇಲೆಯೇ ಸಂಪೂರ್ಣರೇಖಾಚಿತ್ರವನ್ನು ಬರೆದುಕೊಂಡು ಹಸಿಯಾಗಿರುವ ಭಿತ್ತಿಗೆ ಈ ಕಾಗದವನ್ನು ಅಂಟಿಸುತ್ತಾರೆ. ನಂತರ ಚೂಪಾದ ಕಂಠದಿಂದ ಕಾಗದದ ಮೇಲೆಯೇ ಚಿತ್ರದ ರೇಖೆಯನ್ನು ಕೊರೆಯುತ್ತಾ ಹೋಗಿ ಚಿತ್ರರಚನೆಯು ಮುಗಿದ ನಂತರ ಭಿತ್ತಿಯು ಒಣಗಿದೆ ಎಂದು ಖಚಿತವಾದ ಮೇಲೆ ನೀರನ್ನು ಚಿಮುಕಿಸಿ ಅಂಟಿಕೊಂಡ ಕಾಗದವನ್ನು ಕಿತ್ತಿ ತೆಗೆಯುತ್ತಾರೆ. ಗೆರೆಕೊರೆದ ರೇಖಾಚಿತ್ರ ಮೂಡಿರುವ ಭಿತ್ತಿಗೆ ವರ್ಣಗಳಿಂದ ತುಂಬುವರು ಹೀಗೆ ಕಾಗದವು ಭಿತ್ತಿ ಪರಿಕರವಾಗಿ ಮೂಡಿಬಂದಿದೆ.[೨೯]

---

೨೯. ಕರಿಗೌಡ ಬೀಚನಹಳ್ಳಿ (ಸಂ): "ಕುಶಲಕಲೆಗಳು", ಪು.೨೭೬.

**ಭಿತ್ತಿ ಚಿತ್ರರಚನಾ ಪರಿಕರಗಳು:**

ಭಿತ್ತಿ ಸಿದ್ಧವಾದ ಮೇಲೆ ಚಿತ್ರರಚನೆ ಮಾಡಬೇಕಾದಾಗ ಸೀಸದ ಕಡ್ಡಿ ಬಣ್ಣ ಕುಂಚಗಳಂತಹ ಅನೇಕ ವಸ್ತುಗಳು ಬೇಕಾಗುತ್ತವೆ ಇವುಗಳನ್ನು ಇಲ್ಲಿ ಭಿತ್ತಿಚಿತ್ರರಚನಾ ಪರಿಕರಗಳೆಂದು ಚರ್ಚಿಸಲಾಗಿದೆ.

**ವರ್ತಿಕಾ (ಸೀಸದ ಕಡ್ಡಿ):**

ಪ್ರಾಚೀನ ಭಿತ್ತಿಚಿತ್ರಕಲಾವಿದರು ತಮ್ಮ ಚಿತ್ರರಚನೆಗೆ ಬೇಕಾಗುವ ಸೀಸದ ಕಡ್ಡಿಗಳನ್ನು ತಾವೇ ತಯಾರಿಸಿಕೊಳ್ಳುತ್ತಿದ್ದರು. "ಮಾನಸೋಲ್ಲಾಸವು" ಸೀಸದ ಕಡ್ಡಿ ತಯಾರಿಸಲು ದೀಪದ ಕಪ್ಪು ಮತ್ತು ಕುದಿಸಿದ ಅಕ್ಕಿಗಂಜಿಯನ್ನು ಒಂದು ಪಾತ್ರೆಯಲ್ಲಿ ಕಲಿಸಿಕೊಂಡು ಈ ಮಿಶ್ರಣದಿಂದ ದೀಪದ ಬತ್ತಿಯ ಆಕಾರಗಳನ್ನು ಮಾಡಿಕೊಳ್ಳಬೇಕು ಈ ಕಪ್ಪುಬತ್ತಿಗಳನ್ನೇ ವರ್ತಿಕವೆಂದು ಹೇಳುತ್ತದೆ. ಹಾಗೂ ಇದ್ದಿಲು ಪುಡಿ ಮತ್ತು ಕಾಳಿನ ಹಿಟ್ಟು ಬೆರಸಿ ಅದಕ್ಕೆ ಮೇಣ ಸೇರಿಸಿ ಕಡ್ಡಿಗಳನ್ನಾಗಿ ಮಾಡಿಕೊಳ್ಳುವುದು. ಆ ಕಡ್ಡಿಗಳನ್ನೇ ವರ್ತಿಕಾ ಎಂದು ಕರೆದು ಅವುಗಳನ್ನು ಚಿತ್ರರಚನೆಗೆ ಉಪಯೋಗಿಸಲು ತಿಳಿಸಿದೆ.

**ಕುಂಚ (Brush) :**

ಅತಿ ತೆಳುವಾದ ಅತೀ ಸೂಕ್ಷ್ಮವಾದ ಕಡ್ಡಿಗಳನ್ನು ಕೂಡಿಸಿ ಕಸಬರಿಗೆಯಂತೆ ಕಟ್ಟಲಾದ ಸಾಧನವಾಗಿರುತ್ತದೆ, ನವಿಲುಗರಿಯ ಕುರ್ಚಿಕೆ, ಚವರಿ, ಚಾಮರಗಳಿಗೂ ಕುಂಚ ಎನ್ನಲಾಗಿದೆ. ಕುಂಚಕ್ಕೆ ಚಿತ್ರರಚಿಸುವ ಸಾಧನ ಎಂದು ೧೯೫೨ರಲ್ಲಿ ಹೇಳಿಕೊಡಲಾಯಿತು. ಪ್ರಾಚೀನ ಸಂಸ್ಕೃತ ಗ್ರಂಥಗಳಲ್ಲಿ ಕುರ್ಚಕ, ತೂಲಿಕ, ವರ್ತಿಕ ಎಂದು ಹೇಳಲಾಗಿದೆ. ಕುರ್ಚಕವು ಗಿಡದ ಟೊಂಗೆಯಿಂದ ಜಜ್ಜಿ ಮಾಡಲಾಗುತ್ತದೆ. ತೂಲಿಕಾ ಹತ್ತಿಯಿಂದ ಮಾಡಲ್ಪಟ್ಟಿರುತ್ತದೆ. ವರ್ತಕವು ಸುರುಳಿಯಾಗಿ ಗಟ್ಟಿಯಾಗಿ ಸುತ್ತಿದ ಹತ್ತಿಯ ಚೂಪು ತುದಿಯ ತುಂಡು ಆಗಿರುತ್ತದೆ. ಕುಂಚಗಳ ಸ್ವರೂಪವನ್ನು ತಿಳಿಸಿಕೊಡುತ್ತದೆ. "ಸಮರಾಂಗಣಸೂತ್ರಧಾರ"ವು ೧. ಕುರ್ಚವನ್ನು-ಆಲದ ಗಿಡದಿಂದಲೂ ೨. ಹಸ್ತಕುರ್ಚವನ್ನು-ಅಶ್ವಥ್ ವೃಕ್ಷದಿಂದಲೂ ೩. ಭಾಸಕುರ್ಚವನ್ನು-ಪ್ಲಾಕ್ಷಾಮರದಿಂದಲೂ ೪. ಕಲ್ಲು ಕುರ್ಚವನ್ನು-ಔದುಂಬರ ಗಿಡದಿಂದಲೂ, ೫. ವರ್ತನಿಕುರ್ಚವನ್ನು ಪ್ರಾಣಿಗಳ ಕೂದಲುಗಳಿಂದ ಕುಂಚವನ್ನು ನಿರ್ಮಿಸಬೇಕೆಂದು ತಿಳಿಸುತ್ತದೆ. "ಮಾನಸೋಲ್ಲಾಸವು" ಕುಂಚಗಳಲ್ಲಿ ಮೂರು ಪ್ರಬೇಧಗಳ ಕುರಿತು ತಿಳಿಸಿದ್ದು, ೧. ಚಪ್ಪಟೆ ಅಥವಾ ಸ್ಥೂಲವಾಗಿದ್ದು, ೨. ಮಧ್ಯಮವಾಗಿದ್ದು, ೩. ಸೂಕ್ಷ್ಮವಾಗಿದ್ದುದನ್ನು ತಿಳಿಸುತ್ತಾ ಚಪ್ಪಟೆಯ ಕುಂಚದಿಂದ ವಿಶಾಲವಾದ ಪ್ರದೇಶದಲ್ಲಿ ಬಣ್ಣ ತುಂಬಲು, ಮಧ್ಯಮ ಕುಂಚದಿಂದ ಒಳಭಾಗದಲ್ಲಿ ಬಣ್ಣ ತುಂಬಲು ಹಾಗೂ ಸೂಕ್ಷ್ಮ ಕುಂಚಗಳನ್ನು ಸೂಕ್ಷ್ಮ ಕುಂಚಗಳಿಗಾಗಿ ಉಪಯೋಗಿಸಬೇಕೆಂದೂ ತಿಳಿಸಿದೆ. "ಶಿಲ್ಪರತ್ನವು" ಕುಂಚದ ಮುಖಭಾಗದ ಅಳತೆಯ ಎಂಟುಪಟ್ಟರಷ್ಟು ಹಿಡಿಕೆಯು ಉದ್ದವಾಗಿರಬೇಕೆಂದು ಹೇಳಿದ್ದು ಹಿಡಿಕೆಯ ಆಕಾರವು ಎಂಟುಕೋನವಾಗಿ ಇಲ್ಲವೇ ಸಿಲಿಂಡರ

ಆಕಾರದ ಹಾಗೆ ದುಂಡಾಗಿ ರಚಿಸಬೇಕೆಂದು ಹೇಳುತ್ತ ಈ ಕುಂಚದ ಹಿಡಿಕೆಯ ಮೇಲೆ ಬಾರ್ಲಿ ಕಾಳಿನ ಆಕಾರ (ಗೂಟವನ್ನು) ಕಟ್ಟಿಗೆಯನ್ನು ಅರ್ಧ ಅಥವಾ ಒಂದು ಅಂಗುಲ ಮುಖಭಾಗದಿಂದ ಬಿಟ್ಟು ಕೂಡ್ರಿಸಬೇಕು. ಕರುವಿನ ಕಿವಿಯಿಂದ ಪಡೆದ ಕೂದಲುಗಳಿಂದ ಚಪ್ಪಟೆ ಕುಂಚ ನಿರ್ಮಿಸಬೇಕು. ಆಡಿನ ಹೊಟ್ಟೆಯ ಬುಡದ ಕೂದಲುಗಳನ್ನು ಮತ್ತು ಕಾಡು ಇಲಿಯ ಬಾಲದ ಕೂದಲುಗಳನ್ನು ಸೂಕ್ಷ್ಮ ಕುಂಚಗಳಿಗೆ ಬಳಸಬೇಕೆಂದು ತಿಳಿಸಿದೆ. ಚೂಪು ತುದಿಯನ್ನು ಹೊಂದಿದ ಕೂದಲುಗಳನ್ನು ತೆಗೆದುಕೊಂಡು ದುಂಡದಾದ ಹಿಡಿಕೆಗೆ ಬಾರ್ಲಿಕಾಳಿನ ಆಕಾರದ ಗುರ್ತು ಮಾಡಿಕೊಂಡ ಜಾಗದಲ್ಲಿ ಸಿಕ್ಕಿಸಿ, ಅಂಟು ಇಲ್ಲವೇ ಲಾಕ್ಷಾರಸದಿಂದ ಬಂಧಿಸಬೇಕು. ಆಗ ಉತ್ತಮವಾದ ಕುಂಚ ತಯಾರಾಗುವುದು ಎಂಬ ಕುಂಚಗಳ ಸ್ವರೂಪ ಮತ್ತು ತಯಾರಿಕೆಯ ಬಗೆಗೆ ವಿವರವಾಗಿ ತಿಳಿಸುತ್ತದೆ.[೩೦]

**ವರ್ಣ (ಬಣ್ಣ):**

ಭಿತ್ತಿ ಚಿತ್ರಗಳಿಗೆ ಬಳಸುವ ಬಣ್ಣಗಳ ಕುರಿತು ನಮಗೆ ಸಿಗುವ ಆಕರಗಳು ಶಾಸ್ತ್ರಗ್ರಂಥಗಳಲ್ಲಿ ಕೊಡುವ ವಿವರಗಳು ಗಮನಾರ್ಹವಾಗಿವೆ. ಬಣ್ಣದ ಮೂಲ ಕುರಿತು ದೇವಾಂಗ ಜನರಲ್ಲಿ ಪೌರಾಣಿಕ ಕಥೆಯೊಂದು ಪ್ರಚಲಿತದಲ್ಲಿದೆ. ಜಲದಿಂದ ಬಿಳುಪು, ಅಗ್ನಿಯಿಂದ ಕೆಂಪು, ಭೂಮಿಯಿಂದ ಹಳದಿ, ವಾಯುವಿನಿಂದ ಕಪ್ಪು ವರ್ಣಗಳು ಉತ್ಪನ್ನವಾಗಿವೆ.

ಬಿಳುಪಿಗೆ – ವಿಷ್ಣು

ಕೆಂಪಿಗೆ – ಮಹೇಶ್ವರ

ಹಳದಿಗೆ – ಗೌರಿ

ಕಪ್ಪಿಗೆ – ರುದ್ರ

"ಕಾಶ್ಯಪ ಶಿಲ್ಪಶಾಸ್ತ್ರವು" ಹೀಗೆ ದೇವತೆಗಳನ್ನು ವರ್ಣಕ್ಕೆ ಸಂಕೇತಿಸಿರುವುದನ್ನು ಕಾಣುತ್ತೇವೆ. ಹೀಗೆ ವರ್ಣಗಳ ಕುರಿತು ಪೌರಾಣಿಕ ಕಲ್ಪನೆಗಳು ಒಂದೆಡೆ ಆದರೆ (ವರ್ಣಗಳ ಕುರಿತು) ವೈಜ್ಞಾನಿಕ ಮಹತ್ವದ ಹಿನ್ನೆಲೆಯಲ್ಲಿ ನೋಡಿದಾಗ ಸೂರ್ಯನಿಂದ ಹೊರಹೊಮ್ಮುವ ಬೆಳಕು (ಪ್ರಕಾಶ) ಒಂದು ಶಕ್ತಿಯಾಗಿ ಹೊರಹೊಮ್ಮಿದ್ದು, ಈ ಪ್ರಕಾರದಲ್ಲಿ ಏಳು ಬಣ್ಣಗಳು ಅಡಕವಾಗಿವೆಯೆಂದು ನೀಲಿ, ನೆರಳೆ, ಹಸಿರು, ಹಳದಿ, ಕಿತ್ತಳೆ, ಕೆಂಪು ಹೀಗೆ ವರ್ಣಗಳು ಅಡಕವಾಗಿರುವುದು ಕಂಡುಬರುತ್ತದೆ. ನ್ಯೂಟನ್‌ನು ವರ್ಣಚಕ್ರವನ್ನು ರಚಿಸುವ ಮೂಲಕ ಈ ಏಳೂ ವರ್ಣಗಳು ಬಿಳಿಯ ವರ್ಣದಲ್ಲಿವೆ ಎಂಬುದನ್ನು ದೃಢಪಡಿಸಿದನು. ಮಾನವನ ವಿವಿಧ ಅಂಗಾಂಗಗಳ ಮೇಲೆ ವರ್ಣಗಳು ಪ್ರಭಾವ ಬೀರುತ್ತವೆ. ಕೆಂಪು

---

೩೦. ಡಾ.ಯಾದಪ್ಪ ಪರದೇಶಿ: "ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ", ಪು. ೧೨೦.

ಬಣ್ಣವು ದೇಹದ ಆಡ್ರಿನಲ್‌ಗ್ರಂಥಿಗೆ ಸಂಬಂಧಿಸಿದ್ದು ಇದು ರಕ್ತದ ಮೇಲೆ ತನ್ನದೇ ಆದ ಪ್ರಭಾವ ಬೀರಿದೆ. ಮನಷ್ಯನ ದೃಢತೆ, ಪ್ರೀತಿ, ಪ್ರೇಮ ಹಾಗೂ ಸೃಜನಶೀಲತೆಗಳಿಗೆ ಸಂಕೇತವಾಗಿದೆ. ಕಿತ್ತಳೆವರ್ಣವು ದೇಹದ ಗುಲ್ಮದ ಮೇಲೆ ಪ್ರಭಾವ ಬೀರಿ ರಕ್ತಪರಿಚಲನೆಗೆ ಸಹಯ ಮಾಡುತ್ತದೆ. ಹಳದಿ ವರ್ಣವು ದೇಹದ ಪಿತ್ತ ಜನಕಾಂಗ, ನಾಭಿ, ಮೆದುಳು ಹಾಗೂ ನರಗಳ ಮೇಲೆ ಪ್ರಭಾವ ಬೀರುತ್ತದೆ ಹಾಗೂ ಜ್ಞಾನ, ಅರಿವು, ಉಲ್ಲಾಸಗಳನ್ನು ವರ್ಧಿಸಿ ಸೂಕ್ತ ತೀರ್ಮಾನ ತೆಗೆದುಕೊಳ್ಳಲು ಸಹಾಯ ಮಾಡುತ್ತದೆ. ಹಸಿರು ವರ್ಣವು ದೇಹದ ಥೈಮಸ್ ಗ್ರಂಥಿ ಮತ್ತು ಹೃದಯದ ಚಲನೆಯನ್ನು ಹತೋಟಿಯಲ್ಲಿಡಲು ಸಹಾಯ ಮಾಡುತ್ತದೆ. ನೀಲವರ್ಣವು ದೇಹದ ಕುತ್ತಿಗೆ ಥೈರಾಯಿಡ್ ಗ್ರಂಥಿಗಳ ಮೇಲೆ ಪ್ರಭಾವ ಬೀರಿ ದೇಹದ ಉಷ್ಣತೆಯನ್ನು ಸಮತೋಲನಗೊಳಿಸುತ್ತದೆ. ನೇರಳೆವರ್ಣವು ಶಿರದಲ್ಲಿರುವ ಬ್ರಹ್ಮರಂಧ್ರಕ್ಕೆ ಸಂಬಂಧಿಸಿದ್ದು, ಮನಸ್ಸಿನ ಮೇಲೆ ಹತೋಟಿ ಹೊಂದುತ್ತದೆ. ಹೀಗೆ ಮಾನವನ ಜೀವನದ ಜೊತೆಗೆ ವರ್ಣಗಳು ಅವಿನಾಭಾವ ಸಂಬಂಧ ಹೊಂದಿವೆ.[೩೧]

[೩೧] ಭಿತ್ತಿಚಿತ್ರಕಲೆಯಲ್ಲಿ ವೈವಿಧ್ಯಮಯವಾದ ವರ್ಣಗಳು ಬಳಕೆಗೊಂಡಿದ್ದು, ಅವುಗಳನ್ನು ಯಾವ ಮೂಲಗಳಿಂದ ತಯಾರಿಸಿಕೊಳ್ಳಲಾಗಿದೆ ಎಂಬ ವಿವರಗಳು ಮಹತ್ವವಾದವುಗಳಾಗಿವೆ.

೧. ಖನಿಜಮೂಲ ವರ್ಣಗಳು

೨. ಸಸ್ಯಮೂಲ ವರ್ಣಗಳು

೩. ಲೋಹಮೂಲ ವರ್ಣಗಳು

೪. ರಾಸಾಯನಿಕ ಮೂಲವರ್ಣಗಳು[೩೨]

**ಖನಿಜ ಮೂಲ ವರ್ಣಗಳು:**

ಭೂಮಿಯಿಂದ ದೊರೆಯುವ ಅಂದರೆ ಕಲ್ಲು, ಮಣ್ಣುಗಳಿಂದ ಪಡೆಯುವ ವರ್ಣಗಳು ಖನಿಜಮೂಲದ ವರ್ಣಗಳಾಗಿವೆ. ವಿವಿಧ ರೀತಿಯ ವರ್ಣಗಳ ಕಲ್ಲು, ಮಣ್ಣಿನ ಗಟ್ಟಿ, ಕಬ್ಬಿಣದ ಅದಿರುಗಳಂತಹ ಬೇರೆ ಬೇರೆ ಅದಿರುಗಳಿಂದ ಪ್ರಾಚೀನರು ವರ್ಣತಯಾರಿಸಿಕೊಂಡ ವಿವರಗಳು ದೊರೆಯುತ್ತವೆ. ಸುಣ್ಣವು ಭಿತ್ತಿಚಿತ್ರಗಳಲ್ಲಿ ಬಳಸುವ ಬಹುಮುಖ್ಯವಾದ ಖನಿಜಮೂಲ ವರ್ಣವಾಗಿದೆ. ಕೆಲವು ಖನಿಜಮೂಲ ವರ್ಣಗಳನ್ನು ಮಿಶ್ರಣಮಾಡಿ ವರ್ಣಗಳನ್ನು ತಯಾರಿಸಲಾಗುತ್ತದೆ. ಇಂತಹ ಗುಣಗಳಿಂದಾಗಿಯೇ ಖನಿಜಮೂಲವರ್ಣಗಳು ಭಿತ್ತಿ ಚಿತ್ರಗಳಿಗೆ ಹೆಚ್ಚು ಸೂಕ್ತವಾಗಿವೆ ಎಂದು ತಿಳಿದುಬರುತ್ತದೆ.

---

೩೧. ಅ.ಲ.ನರಸಿಂಹನ್: "ಕರ್ನಾಟಕದ ಭಿತ್ತಿಚಿತ್ರ ಪರಂಪರೆ", ಪು.೧೩೮.

೩೨. ಡಾ.ಯಾದಪ್ಪ ಪರದೇಶಿ: "ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ", ಪು.೯೬.

**ಸಸ್ಯಮೂಲ ವರ್ಣಗಳು:**

ಗಿಡಗಳ ಹೂವು, ಎಲೆ, ಹಣ್ಣು, ಬೀಜ, ಕಾಂಡ, ಚಿಗುರೆಲೆ ಮತ್ತು ಬೇರುಗಳಿಂದ ವರ್ಣವನ್ನು ಪ್ರಾಚೀನರು ತಯಾರಿಸಿಕೊಳ್ಳುತ್ತಿರುವುದು ತಿಳಿದುಬರುತ್ತದೆ. ಇಂಡಿಗೋಸಸ್ಯದಿಂದ ನೀಲಿವರ್ಣ, ಬರ್ಚ್ ಎಂಬ ಗಿಡದ ಎಲೆಗಳಿಂದ ಹಳದಿ ವರ್ಣ, ಮ್ಯಾಡರ್ ಎಂಬ ಹಬ್ಬುವ ಬಳ್ಳಿಯ ಬೇರುಗಳಿಂದ ಕೆಂಪು ವರ್ಣವನ್ನು ಬಹಳ ಪೂರ್ವದಲ್ಲಿಯೇ ಪಡೆಯುತ್ತಿದ್ದ ಬಗೆಗೆ ತಿಳಿದು ಬರುತ್ತದೆ. ಭಿತ್ತಿಚಿತ್ರ ರಚನೆಯಲ್ಲಿ ಈ ಸಸ್ಯ ಮೂಲದ ವರ್ಣವನ್ನು ಬಳಸುತ್ತಿದ್ದರು. ಆದರೆ ಖನಿಜಮೂಲ ವರ್ಣಗಳಿಗಿಂತ ಬೇಗನೆ ಸಸ್ಯಮೂಲ ವರ್ಣಗಳು ಹೊಳಪನ್ನು ಕಳೆದುಕೊಳ್ಳುತ್ತವೆ. ಆದ್ದರಿಂದ, ಖನಿಜಮೂಲ ವರ್ಣಗಳನ್ನೇ ಹೆಚ್ಚಾಗಿ ಭಿತ್ತಿಚಿತ್ರಗಳಲ್ಲಿ ಬಳಸಿರುವುದು ಕಂಡುಬರುತ್ತದೆ.

**ಲೋಹ ಮೂಲದ ವರ್ಣಗಳು:**

ಅವಶ್ಯಕತೆ ಬಿದ್ದಾಗ ಲೋಹ ಮೂಲಗಳಿಂದಲೂ ವರ್ಣಗಳನ್ನು ತಯಾರಿಸುತ್ತಿದ್ದರು. ಲೋಹವನ್ನು ತೆಳುವಾದ ಹಾಳೆಯಾಗಿಸಿಕೊಂಡು, ಅವಶ್ಯವಿದ್ದಲ್ಲಿ ಕತ್ತರಿಸಿ ಅಂಟಿಸುತ್ತಿದ್ದರು. ಇಲ್ಲವೇ ಕರಗಿಸಿ ದ್ರವರೂಪಮಾಡಿಕೊಂಡು ಚಿತ್ರಕ್ಕೆ ಲೇಪಿಸುತ್ತಿದ್ದರು. ವರ್ಣಚಿತ್ರಕ್ಕಾಗಿ ಬಂಗಾರ, ಬೆಳ್ಳಿ, ತಾಮ್ರ, ಅಬ್ರಕ, ಸೀಸಗಳಂತಹ ಲೋಹಗಳಿಂದ ವರ್ಣಗಳನ್ನು ತಯಾರಿಸುತ್ತಿದ್ದರೆಂದು ತಿಳಿದು ಬರುತ್ತದೆ. ಲೋಹದ ಹಾಳೆಯನ್ನು ಕರಗಿಸಿ ದ್ರವರೂಪವನ್ನು ಮಾಡಿಕೊಂಡು ವಜ್ರಲೇಪದೊಡನೆ ಬೆರಸಿ ಕುಂಚದ ಸಹಾಯದಿಂದ ಚಿತ್ರಗಳಿಗೆ ಹಚ್ಚಬೇಕು ಎಂದು "ಶಿವತತ್ವರತ್ನಾಕರ"ವು ಹೇಳುತ್ತದೆ.

**ರಾಸಾಯನಿಕ ಮೂಲ ವರ್ಣಗಳು:**

ಭಿತ್ತಿಚಿತ್ರಗಳಲ್ಲಿ ರಾಸಾಯನಿಕ ವರ್ಣಗಳ ಬಳಕೆಯು ಕ್ರಿ.ಶ.೧೯ನೆಯ ಶತಮಾನದಿಂದ ಪ್ರಾರಂಭವಾಯಿತು. ಪಾಶ್ಚಿಮಾತ್ಯರ ಸಂಪರ್ಕದಿಂದಾಗಿ ರಾಸಾಯನಿಕವಾಗಿ ತಯಾರಿಸಿದ ಜಲವರ್ಣ, ತೈಲವರ್ಣಗಳು ಭಾರತವನ್ನು ಪ್ರವೇಶಿಸಿದವು. ರಾಸಾಯನಿಕವರ್ಣಗಳು ಟ್ಯೂಬುಗಳಲ್ಲಿ, ಬಾಟಲಿ, ಡಬ್ಬಾಗಳಲ್ಲಿ ದೊರೆಯುತ್ತಿದ್ದು, ಬಹಳ ದಿನಗಳವರೆಗೆ ಕೆಡದಂತೆಯೂ ಉಳಿಸಿಕೊಳ್ಳಬಹುದಾಗಿದೆ. ವೈಜ್ಞಾನಿಕವಾಗಿ ಈ ಅನುಕೂಲತೆಗಳು ನಮಗೆ ದೊರೆಯುತ್ತಿದ್ದು ವರ್ಣಗಳ ಮಿಶ್ರಣ ಮಾಡಿಕೊಳ್ಳುವ ತೊಂದರೆಯೂ ಈಗಿಲ್ಲ. ಸಾಕಷ್ಟು ವರ್ಣದ ಛಾಯೆಗಳು ಸಿದ್ದವಾಗಿರುವುವೇ ದೊರೆಯುತ್ತವೆ. ಭಾರತೀಯ ಮೂಲವರ್ಣಗಳು ಬಿಳಿ, ಕಪ್ಪು, ಕೆಂಪು, ಹಸಿರು, ಹಳದಿ ಎಂಬ ಪಂಚವರ್ಣಗಳನ್ನು ಗುರುತಿಸಿದ್ದು, ಇತ್ತೀಚೆಗೆ ವೈಜ್ಞಾನಿಕವಾಗಿ ಕಂಡುಕೊಂಡ ಮೂಲವರ್ಣಗಳು ಕೆಂಪು, ಹಳದಿ, ನೀಲಿ ಈ ಮೂರುವರ್ಣಗಳಾಗಿವೆ. ಇವುಗಳಿಂದ ಸಾವಿರಾರು ಮಿಶ್ರವರ್ಣಗಳು ಸಿದ್ಧವಾಗಿವೆ.

ಒಟ್ಟಾರೆಯಾಗಿ ಭಿತ್ತಿಚಿತ್ರಕಲೆಯ ಪರಿಕರಗಳು ಆಯಾ ಮಾಧ್ಯಮದ ಅವಶ್ಯಕತೆಯ ಹಿನ್ನೆಲೆಯಲ್ಲಿ ಬೇರೆ ಬೇರೆಯಾಗಿ ಬಳಕೆಗೊಂಡಿರುವುದು ಮೇಲಿನ ವಿವರಣೆಯಿಂದ ತಿಳಿದು ಬರುತ್ತದೆ. ಈ ಭಿತ್ತಿ ಸಿದ್ಧತೆ, ಬಣ್ಣಗಳ ತಯಾರಿಕೆ, ಮಿಶ್ರಣ ರೀತಿ-ವಿಧಾನ, ಪರಿಕರಗಳು, ಲೇಪನ, ಕುತೂಹಲಕಾರಿಯಾಗಿ ಕಂಡುಬರುತ್ತವೆ.



ಅಧ್ಯಾಯ : ನಾಲ್ಕು

# ನಿಪ್ಪಾಣಿ ವಾಡೆ ಭಿತ್ತಿ ಚಿತ್ರಕಲೆಯ ವಸ್ತು, ವಿಷಯ ಮತ್ತು ವೈವಿಧ್ಯತೆ

ಅಧ್ಯಾಯ : ನಾಲ್ಕು

# ನಿಪ್ಪಾಣಿ ವಾಡೆ ಭಿತ್ತಿ ಚಿತ್ರಕಲೆಯ ವಸ್ತು, ವಿಷಯ ಮತ್ತು ವೈವಿಧ್ಯತೆ

ಆದಿಮಾನವ ಚಿತ್ರಕಲೆಯನ್ನು ಇತರರೊಡನೆ ವ್ಯವಹರಿಸಲು ಸಂವಹನ ಭಾಷೆಯನ್ನಾಗಿ, ತನ್ನ ಮನದ ಭಾವನೆಗಳನ್ನು, ಅನುಭವಿಸಿದ ಅನುಭವಗಳನ್ನು. ಹೊರಹಾಕಲು ಒಂದು ಮಾಧ್ಯಮವನ್ನಾಗಿ ಮಾಡಿಕೊಂಡ. ಹೀಗೆ ಚಿತ್ರಕಲೆಯು ಆದಿಮಾನವನ ಬದುಕಿನಲ್ಲಿ ಒಂದು ಮಹತ್ವದ ಪಾತ್ರವಹಿಸಿದ್ದುದು. ಇತಿಹಾಸದಿಂದ ತಿಳಿದುಬರುತ್ತದೆ. ಗುಹೆಯ ಮತ್ತು ಶಿಲಾಯುಗಗಳ ಮೇಲೆ ಗೀಚುತ್ತಿದ್ದ ಅದಿಮಾನವ. ನಾಗರಿಕತೆ ಬೆಳೆದಂತೆ ಬಯಲು ಪ್ರದೇಶದ ನದಿಯ ದಡದಲ್ಲಿ ಮನೆಗಳನ್ನು ನಿರ್ಮಿಸಲು ಪ್ರಾರಂಭಿಸಿದ ಮುಂದೆ ದೇವಾಲಯಗಳ ರಚನೆಗಳಾದವು. ಅವುಗಳ ಅಲಂಕಾರಕ್ಕೆ ಚಿತ್ರಗಳನ್ನು ಬಳಸಲು ಪ್ರಾರಂಭಿಸಿದ. ಕಾಲಾಂತರದಲ್ಲಿ ರಾಜ್ಯವನ್ನು ಕಟ್ಟಲು ತೊಡಗಿದ. ಆಗ ರಾಜಾಶ್ರಯದಲ್ಲಿ ಚಿತ್ರಕಲೆಯು ಬೆಳೆಯುತ್ತ ಅನೇಕ ಆಯಾಮಗಳನ್ನು ಹೊಂದುತ್ತ, ಆಕಾರ, ಗಾತ್ರ, ಪ್ರಮಾಣಗಳು, ವರ್ಣಗಳ ಹೊಂದಾಣಿಕೆ ಸಮತೋಲನಗಳಂತಹ ಅಂಶಗಳನ್ನು ನಿಯಮಬದ್ಧವಾಗಿ ಚಿತ್ರಿಸಲು ಪ್ರಾರಂಭಿಸಿದ. ಹೀಗೆ ಚಿತ್ರಕಲೆಯು ನಾಗರಿಕತೆ ಬೆಳೆದು ಬಂದಂತೆ ಕಲೆಯು ನಿರಂತರವಾಗಿ ಅದರೊಂದಿಗೆ ಒಟ್ಟೊಟ್ಟಿಗೆ ಬೆಳೆಯುತ್ತಾ ಬಂದಿದೆ.

ಫೋಟೋಗ್ರಾಫಿ ಭಾರತಕ್ಕೆ ಬರುವವರೆಗೂ ರಾಜಮಹಾರಾಜರು ಮಹಾರಾಣಿಯರು ಮಂತ್ರಿಗಳು, ಸೇನಾಧಿಪತಿಗಳು, ನವಾಬರು, ಪಾಳೇಗಾರರು ಚಿತ್ರರಚಿಸಲು ಪ್ರೊತ್ಸಾಹಿಸಿದ್ದು ಒಂದೆಡೆಯಾದರೆ. ಸಮಾಜದ ಉನ್ನತವರ್ಗದವರು ಪ್ರತಿಷ್ಠಿತರು ಮತ್ತು ಪ್ರಭಾವಿ ವ್ಯಕ್ತಿಗಳು ಇನ್ನೊಂದೆಡೆಯಾಗಿ ವಾಸ್ತು ಅಲಂಕಾರಕ್ಕಾಗಿ ಬಿಡಿಸುತ್ತಿದ್ದ ಚಿತ್ರಗಳು, ವಿಷಯಾಧಾರಿತ ಭಿತ್ತಿ ಚಿತ್ರಗಳತ್ತ ಬೆಳವಣಿಗೆಹೊಂದುತ್ತ ರಾಜಕೀಯ, ಸಾಮಾಜಿಕ, ಚಾರಿತ್ರಿಕ, ಆಧ್ಯಾತ್ಮಿಕ ಹೀಗೆ ವೈವಿಧ್ಯಮಯವಾದ ವಿಷಯಗಳು ಮೈತಳೆದವು.

ಭಾರತವೂ ಸೇರಿದಂತೆ ಕರ್ನಾಟಕದ ಶಿಷ್ಟಪದ ಚಿತ್ರಕಲೆಯ ಇತಿಹಾಸವನ್ನು ಸಾಮಾನ್ಯವಾಗಿ ನಾವು ಅಜಂತಾ ಚಿತ್ರಕಲೆಯಿಂದಲೇ ಪ್ರಾರಂಭಿಸುತ್ತೇವೆ. ಅಂತೆಯೇ ಭಿತ್ತಿಚಿತ್ರಗಳಲ್ಲಿ ಸಮಕಾಲೀನ ಚಾರಿತ್ರಿಕ

ಅಂಶಗಳನ್ನು ಚಿತ್ರಿಸುವ ಅಥವಾ ದಾಖಲಿಸುವ ಪರಂಪರೆಯೂ ಅಲ್ಲಿಂದಲೇ ಆರಂಭವಾಗಿರುವುದನ್ನು ಗುರುತಿಸುತ್ತೇವೆ. "ಚಾಲುಕ್ಯರು ರಾಷ್ಟ್ರಕೂಟರು, ಹೊಯ್ಸಳರು ನಂತರ ಬಂದ ವಿಜಯನಗರ ಅರಸರು ತಮ್ಮ ರಾಜ್ಯವನ್ನು ಪೂರ್ವಕ್ಕೆ ಮಹಾರಾಷ್ಟ್ರ, ಪಶ್ಚಿಮಕ್ಕೆ–ಓರಿಸ್ಸಾ, ದಕ್ಷಿಣಕ್ಕೆ ಕನ್ಯಾಕುಮಾರಿಯವರೆಗೆ ಬೆಳೆಸಿದ್ದು. ಹಿಂದೂಯಿಸಮ್‌ನ ಶ್ರೇಷ್ಠತೆಯನ್ನು ಎತ್ತಿಹಿಡಿದ ವಿಜಯನಗರ ಅರಸರು. ದಕ್ಷಿಣಭಾರತದಾದ್ಯಂತ ಭಿತ್ತಿಚಿತ್ರಗಳನ್ನು ರಚಿಸಲು ಪ್ರೋತ್ಸಾಹಿಸಿದರು. ಸೂಕ್ಷ್ಮತೆ ಮತ್ತು ಅಲಂಕಾರಗಳು ರೇಖಾ ವಿನ್ಯಾಸಗಳಲ್ಲಿ ವಿವಿಧ ಸ್ಥಳಾವಕಾಶ, ವಿನ್ಯಾಸ, ಹೊಂದಾಣಿಕೆ, ತರಂಗಬದ್ಧತೆಗಳಿಗೆ ಪ್ರಾಧಾನ್ಯತೆ ಕೊಡತೊಡಗಿದರು. ಇದೆಲ್ಲಾ ಕಲೆಯಲ್ಲಿನ ಪ್ರಯೋಗಗಳಿಂದಾಗಿ ಹುಟ್ಟಿಕೊಂಡ ನವ್ಯ ಆಲೋಚನೆಗಳಾಗಿವೆ. ಈ ವಿಚಾರಗಳನ್ನು ರಾಷ್ಟ್ರಕೂಟರು ತಮ್ಮ ಭಿತ್ತಿ ಚಿತ್ರಗಳಲ್ಲಿ ಪ್ರಾರಂಭಿಸಿದ್ದು. ಮುಂದೆ ಧವಳಗ್ರಂಥಗಳ ಮೂಲಕ ಕಿರುರೂಪಚಿತ್ರಗಳ ರಚನೆಗೆ ಹೆಚ್ಚಿನ ಆದ್ಯತೆ ಸಿಕ್ಕಿರುವುದು ಕಂಡುಬರುತ್ತದೆ. ಈ "ಕಿರುರುರೂಪ ಚಿತ್ರಗಳು" ಭಾರತೀಯ ಕಲಾ ಇತಿಹಾಸಕ್ಕೆ ಹೊಸ ಪರಂಪರೆಯನ್ನು ಹಾಕಿಕೊಟ್ಟ ಕೀರ್ತಿಈ ಗ್ರಂಥಗಳಿಗೆ ಸಲ್ಲುತ್ತದೆ. ಈ ಎಲ್ಲ ಅಂಶಗಳು ವಿಜಯನಗರ ಕಾಲಕ್ಕೆ ರಚನೆಗೊಂಡ ಭಿತ್ತಿಚಿತ್ರಗಳಿಗೆ ಪ್ರೇರಣೆಯಗಿದ್ದು ಒಂದೆಡೆ ಆದರೆ ಇನ್ನೊಂದೆಡೆ "ಸ್ಥಳೀಯ ಅಂಶಗಳೊಂದಿಗೆ ವಾಸ್ತವ ವಿಚಾರಗಳಿಗೆ ಹೆಚ್ಚಿನ ಪ್ರೋತ್ಸಾಹ ನೀಡಿದರು." ಮುಂದೆ ಬಂದ ದಖ್ಖನ್ ಕಲಾವಿದರು. ವಿಜಯನಗರದ ಭಿತ್ತಿಚಿತ್ರಕಲೆಯ ತತ್ವಗಳಿಗೆ. ಪರ್ಷಿಯನ್ ಮತ್ತು ಟರ್ಕಿ ಕಲೆಯ ಭವ್ಯತೆ ಮತ್ತು ಅಲಂಕಾರಿಕ ಅಂಶಗಳೂ ಸೇರಿಕೊಂಡು ರಚನೆಗೊಂಥ 'ದಖ್ಖನ್ ಶಿಷ್ಟಪದ ಚಿತ್ರಗಳು' ಜನಪ್ರಿಯಗೊಂಡವು. ಅದರಲ್ಲೂ ಕಾವ್ಯ– ಸಂಗೀತ– ಚಿತ್ರಗಳ ಸಂಗಮವನ್ನು ಸೃಷ್ಟಿಸಿದ "ದಖ್ಖನ್ ರಾಗಮಾಲಾ ಚಿತ್ರಗಳು" ಭಾರತೀಯ ಕಲಾ ಇತಿಹಾಸಕ್ಕೆ ಹೊಸ ದಿಕ್ಕನ್ನೇ ತೋರಿಸಿದವು. ಹೀಗೆ ಬೆಳೆದು ಬಂದ ವಿಜಯನಗರ ಮರಾಠಾ, ರಾಜಸ್ಥಾನ ಮತ್ತು ದಖ್ಖನ್ ಕಲಾ ಶೈಲಿಗಳು ಕರ್ನಾಟಕದಾದ್ಯಂತ ಹರಡಿಕೊಂಡಿದ್ದು. ಅದರಲ್ಲೂ ಉತ್ತರ ಕರ್ನಾಟಕದಲ್ಲಿ ಬೆಳೆದು ಬಂದ ಭಿತ್ತಿಚಿತ್ರಕಲೆ ಹಸ್ತಪ್ರತಿ ಚಿತ್ರಕಲೆಗಳ ಮೇಲೆ ಪ್ರಭಾವ ಬೀರಿವೆ.[೧] ಈ ಹಿನ್ನೆಲೆಯಲ್ಲಿ ನಿಪ್ಪಾಣಿ ಭಿತ್ತಿಚಿತ್ರಕಲೆಯೂ ಬೆಳವಣಿಯಾಗಿದೆ.

೧. ಮರಾಠಾ ಕಲೆಯಲ್ಲಿ – ವಿಜಯನಗರ, ದಖ್ಖನ್, ಮರಾಠಾ ಹಾಗೂ ಮೊಘಲ್ ಕಲೆಗಳ ಪ್ರಭಾವವಿದೆ.

೨. ಸುರಪೂರ ಕಲೆಯಲ್ಲಿ – ದಖ್ಖನ್ ಹಾಗೂ ಗುಜರಾತ್ ಮತ್ತು ರಾಜಸ್ಥಾನ ಕಲೆಗಳ ಪ್ರಭಾವವಿದೆ.

೩. ನಿಪ್ಪಾಣಿ ಕಲೆಯಲ್ಲಿ – ವಿಜಯನಗರ ದಖ್ಖನ್, ಮರಾಠಾ ಹಾಗೂ ರಾಜಸ್ಥಾನ ಕಲೆಗಳ ಪ್ರಭಾವವಿದೆ

ಹೀಗೆ ರಚನೆಗೊಂಡ ಭಿತ್ತಿ ಚಿತ್ರಗಳಲ್ಲಿ ಪ್ರಸ್ತುತ ಅಧ್ಯಯನವು ನಿಪ್ಪಾಣಿ ವಾಡೆ ಭಿತ್ತಿಚಿತ್ರಗಳಿಗೆ' ಸೀಮಿತವಾಗಿದೆ. ಈ ಚಿತ್ರಗಳ ರಚನಾಕಾಲದ ಬಗ್ಗೆ ಕೆಲವು ವಿದ್ವಾಂಸರು ವಿಭಿನ್ನ ನಿಲವುಗಳನ್ನು ಹೊಂದಿದ್ದು ಕಂಡು ಬರುತ್ತದೆ ಅವು ಹೀಗಿವೆ.



೧. ಶ್ರೀ ಬಿ.ಎಂ.ಪಾಟೀಲ: "ಕರ್ನಾಟಕದ ಕಿರುರೂಪಚಿತ್ರಗಳು–(ಅಪ್ರಕಟಿತ ಲೇಖನ), ಪು.೧೫.

**ನಿಪ್ಪಾಣಿವಾಡೆಯ ಭಿತ್ತಿಚಿತ್ರಗಳ ರಚನಾ ಕಾಲ:**

ಡಾ. ಶಿವರಾಮ ಕಾರಂತರ[೨] ಪ್ರಕಾರ ನಿಪ್ಪಾಣಿ ವಾಡೆ ಭವ್ಯವಾದ ಕಟ್ಟಡವಾಗಿದ್ದು. ಇದು ಸುಮಾರು ಎರಡು ಶತಮಾನಗಳಿಗಿಂತಲೂ ಹಿಂದಿನ ರಚನೆಯಾಗಿದೆ ಎಂದು ಹೇಳುತ್ತ ಭಿತ್ತಿ ಚಿತ್ರಕಲಾ ರಚನೆಯ ಕಾಲವನ್ನು ನಿರ್ಧಿಷ್ಟವಾಗಿ ತಿಳಿಸಿಲ್ಲವಾದರೂ "ಕರ್ನಾಟಕದಲ್ಲಿ ಚಿತ್ರಕಲೆ" ಗ್ರಂಥದಲ್ಲಿ 'ಬಕಾಸುರನ ವಧೆ' ಎಂಬ ಚಿತ್ರದ ಕೆಳಗಡೆ ೧೮ ನೇ ಶತಮಾನವೆಂದು ಗುರುತಿಸಿರುವರು.

ಡಾ.ಎಸ್.ಸಿ.ಪಾಟೀಲರು[೩] "ಕರ್ನಾಟಕದ ಜನಪದ ಚಿತ್ರಕಲೆ" ಎಂಬ ಮಹಾಪ್ರಬಂಧದಲ್ಲಿ "ನಿಪ್ಪಾಣಿಯ ಭಿತ್ತಿಚಿತ್ರಗಳು" ೧೮ನೇ ಶತಮಾನದಲ್ಲಿ ರಚನೆಗೊಂಡವುಗಳೆಂದು ಹೇಳುತ್ತ ಇವು ಮೂಲತಹ ಶಿಷ್ಟಪದ ಚಿತ್ರಗಳಾಗಿದ್ದು ಚಿತ್ರಗಳಲ್ಲಿ ಜನಪದದ ಅಂಶಗಳು ಇರುವುದನ್ನು ಪ್ರಾಸಂಗಿಕವಾಗಿ ಗುರುತಿಸಿದ್ದಾರೆ.

ಪ್ರೊ.ಬಿ.ಶೇಕ್ ಅಲಿ ಅವರು[೪] "ಕರ್ನಾಟಕ ಚರಿತ್ರೆ"ಯ ೧೮ ಮತ್ತು ೧೯ನೆಯ ಶತಮಾನದಲ್ಲಿ ಉತ್ತರ ಕರ್ನಾಟಕದ ಹಲವು ಕಡೆ ಭಿತ್ತಿಚಿತ್ರಗಳು ರಚನೆಗೊಂಡಿದ್ದು, ಅನೇಕ ಸ್ವಾರಸ್ಯಕರವಾದ ಚಿತ್ರಗಳಿವೆ. ಭಗವಾನ್ ಕೃಷ್ಣ ಮತ್ತು ಅವನ ಪತ್ನಿಯರ ಸುಂದರವಾದ ಚಿತ್ರಗಳಿವೆ. ಒಂದು ಹದ್ದನ್ನು ಕೈ ಮೇಲೆ ಕೂರಿಸಿಕೊಂಡಿರುವ ಸುಂದರಿಯಾದ ರಾಜಕುಮಾರಿಯೊಬ್ಬಳ ಒಂದು ಚಿತ್ರವೂ ಇದೆ ಎಂದು ತಿಳಿಸುತ್ತಾರೆ ಅ ಚಿತ್ರಗಳು ನಿಪ್ಪಾಣಿಯ ವಾಡೆಯ ಚಿತ್ರಗಳಾಗಿದ್ದು, ಅವುಗಳ ಕಾಲ ಇಲ್ಲಿ ೧೮ ಮತ್ತು ೧೯ನೆಯ ಶತಮಾನದ್ದೆನ್ನಲಾಗಿದೆ.

ಡಾ.ಯಾದಪ್ಪ ಪರದೇಶಿಯವರು[೫] "ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ" ಎಂಬ ಮಹಾಪ್ರಬಂಧದಲ್ಲಿ ನಿಪ್ಪಾಣಿವಾಡೆ ಭಿತ್ತಿ ಚಿತ್ರಗಳ ಕುರಿತು ಪ್ರಸ್ತಾಪಿಸಿದ್ದು, ಒಳಕೋಣೆಯ ಚಿತ್ರಗಳು, ಹೊರಚಾವಡಿಯ ಚಿತ್ರಗಳೆಂದು ವರ್ಗೀಕರಿಸಿ, ಕಲಾಕೃತಿಗಳ ಕುರಿತು ಅಧ್ಯಯನ ಮಾಡಿರುವರು. ಕ್ರಿ.ಶ. ೧೮೩೯ರಲ್ಲಿ ಬ್ರಿಟೀಷರು ಈ ನಿಪ್ಪಾಣಿ ಸಂಸ್ಥಾನವನ್ನು ವಶಪಡಿಸಿಕೊಳ್ಳುವ ಮೊದಲು ಅಂದರೆ ಕ್ರಿ.ಶ.೧೮೧೦ರಿಂದ ೧೮೩೯ರ ನಡುವಿನ ಅವಧಿಯಲ್ಲಿ ಅಂದರೆ ೧೮೨೦ರಲ್ಲಿ ಈ ಭಿತ್ತಿಚಿತ್ರಗಳನ್ನು ರಚಿಸಿರಬಹುದಾಗಿದೆ ಎಂಬ ಅಭಿಪ್ರಾಯ ವ್ಯಕ್ತಪಡಿಸಿದ್ದಾರೆ.

"ನಿಪ್ಪಾಣಿ ದರ್ಶನ" ಎಂಬ ಗ್ರಂಥದಲ್ಲಿ ಶ್ರೀ ಯಶವಂತರಾವ್ ಚವ್ಹಾಣ ಅವರು[೬] ನಿಪ್ಪಾಣಿ ನಗರ ಸಂಸ್ಕೃತಿ, ಸಾಮಾಜಿಕ, ರಾಜಕೀಯ ಮತ್ತು ಐತಿಹಾಸಿಕ ವಿಷಯಗಳನ್ನು ತಿಳಿಸುತ್ತ ಕ್ರಿ.ಶ.೧೭೯೯ರಲ್ಲಿ

---

೨. ಡಾ.ಶಿವರಾಮ ಕಾರಂತರು: "ಕರ್ನಾಟಕದಲ್ಲಿ ಚಿತ್ರಕಲೆ", ಪು.೮೯.
೩. ಡಾ.ಎಸ್.ಸಿ.ಪಾಟೀಲರು: "ಕರ್ನಾಟಕದ ಜನಪದ ಚಿತ್ರಕಲೆ", ಪು.೫೨.
೪. ಪ್ರೊ.ಬಿ.ಷೇಕ್ಅಲಿ: "ಕರ್ನಾಟಕದ ಚರಿತ್ರೆ", ಮಾಲೆ–೬, ಪು.೨೭೧.
೫. ಡಾ.ಯಾದಪ್ಪ ಪರದೇಶಿ: "ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ", ಪು.೨೯೩.
೬. ಶ್ರೀ ಯಶವಂತರಾವ್ ಚವ್ಹಾಣ: "ನಿಪ್ಪಾಣಿ ದರ್ಶನ", ಪು.೨೮.

ಭುವಿಕೋಟೆಯನ್ನು ನಿರ್ಮಿಸಿದ್ದು, ಇದಕ್ಕೂ ಮೊದಲು ಮರಾಠಾ ಪೇಶ್ವೆ ಎರಡನೇ ಬಾಜೀರಾಯ ಅವನು ಮೈಸೂರು ಅರಸರ ರಾಜ್ಯದ ಮೇಲೆ ದಂಡೆತ್ತಿ ಬಂದು ಧಾರವಾಡದವರೆಗಿನ ಪ್ರದೇಶವನ್ನು ಗೆದ್ದುಕೊಂಡನು. ಆಗ ಸಹಾಯ ಮಾಡಿದ ಸಿದ್ಧೋಜಿರಾವ್ ನಿಂಬಾಳಕರ್ ಅವರನ್ನು ಹೊಗಳಿದ್ದು, ಮರಳಿ ಪೇಶ್ವೆ ಅವರು ಪುಣೆಗೆ ಹೊರಟಾಗ ಸಿದ್ಧೋಜಿರಾವ್ ಪೇಶ್ವೆ ಅವರನ್ನು ತನ್ನ ಅರಮನೆಗೆ ಕರೆದು ಸನ್ಮಾನಿಸಿದ್ದುದು ತಿಳಿದು ಬರುತ್ತದೆ. ಹಾಗೆಯೇ ೧೮೦೭ರ ನಂತರ ನಿಂಬಾಳಕರ್ ಸಿದ್ಧೋಜಿರಾವ್ ಅವರು ಕೊಲ್ಹಾಪೂರದ ಛತ್ರಪತಿಯವರೊಂದಿಗಿನ ಸಂಘರ್ಷದಿಂದಾಗಿ ಆಗಾಗ ಯುದ್ಧಗಳು ನಡೆಯುತ್ತಲೇ ಸಾಗಿದ್ದುದನ್ನು ಗಮನಿಸಿದರೆ ನಿಪ್ಪಾಣಿ ನಗರ ಸ್ಥಾಪನೆಯ ನಂತರ ಅರಮನೆಯನ್ನು ನಿರ್ಮಿಸಿದ್ದಾರೆ. ಅದೂ ಕ್ರಿ.ಶ.೧೭೯ರ ಕ್ಕಿಂತಲೂ ಮುಂಚೆಯೇ ಸ್ಥಾಪಿಸಿದ್ದು, ಆ ಸಮಯದಲ್ಲಿಯೇ ಅರಮನೆಯ ಭಿತ್ತಿಚಿತ್ರಗಳು ರಚನೆಗೊಂಡಿರಬಹುದು. ಈ ರಾಜವಾಡೆ ರಚನೆಯಲ್ಲಿ ತೊಡಗಿದವರೆಲ್ಲರಿಗೂ ಭೂಮಿಯನ್ನು ಮತ್ತು ಹಣವನ್ನು ನೀಡಿ ಆಶ್ರಯದಾತರಾಗಿ ಬೆಳೆದ ಶ್ರೀ ಸಿದ್ಧೋಜಿರಾವ್ ನಿಂಬಾಳಕರ್ ದೇಸಾಯಿಯವರು. ರಾಜವಾಡೆಯ ಭಿತ್ತಿ ಚಿತ್ರಗಳನ್ನು ರಚಿಸಲು ಪ್ರೋತ್ಸಾಹಿಸಿ ಕಲೆಯ ರಾಯಭಾರಿಯಾಗಿ ನಾಡಿನ ಸಂಸ್ಕೃತಿಯನ್ನು ಮೆರೆದಿರುವರು. ಈ ಮೇಲಿನ ಎಲ್ಲ ಅಂಶಗಳನ್ನು ಗಮನಿಸುತ್ತಾ ಹೋದಂತೆ ಕ್ರಿ.ಶ.೧೭೯ಕ್ಕಿಂತ ಪೂರ್ವದಲ್ಲಿ ಈ ಭಿತ್ತಿಚಿತ್ರಗಳು ಸಿದ್ಧವಾಗಿರುವ ಸಾಧ್ಯತೆಗಳೇ ಹೆಚ್ಚಿಗೆ ಇವೆ.

ಇಲ್ಲಿರುವ ಪಹಾರಾಹಾಲ್‌ಗೆ ಡಾ.ಶಿವರಾಮಕಾರಂತರು[೭] ಸರದಾರನ ಮಲಗುವ ಕೋಣೆ ಎಂದು ಹೇಳಿದ್ದು, ಡಾ.ಯಾದಪ್ಪ ಪರದೇಶಿಯವರೂ[೮] ಶಯ್ಯಾಗಾರ ಅಥವಾ ಒಳಕೋಣೆಯೆಂದೂ ಕರೆದಿರುವರು. ಪ್ರೊ.ಬಿ.ಶೇಕ್ ಅಲಿ ಅವರು[೯] "ಕರ್ನಾಟಕದ ಚರಿತ್ರೆ"ಯಲ್ಲಿಯೂ ಶಯ್ಯಾಗಾರದ ಭಿತ್ತಿಚಿತ್ರಗಳು ಎಂದಿದ್ದಾರೆ. ಬಹುಶಃ ಈ ಭಿತ್ತಿಚಿತ್ರಗಳು ಕೃಷ್ಣನ ರಾಸಲೀಲೆಗಳಿಗೆ ಮೀಸಲಾಗಿದ್ದುದರಿಂದ ಇದೊಂದು ಮಲಗುವ ಕೋಣೆ ಎಂದು ಅವರು ಈ ನಿರ್ಧಾರಕ್ಕೆ ಬಂದಿರಬಹುದು. ಆದರೆ ವಾಸ್ತವಿಕವಾಗಿ ಮರಾಠಿಯಲ್ಲಿ "ಪಹಾರಾ ಹಾಲ್" ಎಂದರೆ ಕಾಯುವವನ ಕೋಣೆ ಎಂದಾಗುತ್ತದೆ. ಇದು ಸರದಾರನು ಮಲಗುವ ಕೋಣೆ ಅಲ್ಲವೆನ್ನಲು ಇನ್ನೊಂದು ಕಾರಣವನ್ನೂ ಅರಿಯಬಹುದಾಗಿದೆ. ಭವ್ಯವಾದ ವಾಡೆ ಸುಮಾರು ೧೮ ಗುಂಟೆಯಲ್ಲಿ ನಿರ್ಮಾಣವಾಗಿದ್ದು, ರಾಜವಾಡೆಗೆ ತಕ್ಕುದಾದ ಮಲಗುವ ಕೋಣೆಯನ್ನೂ, ನಿರ್ಮಾಣ ಮಾಡಬೇಕಾಗುತ್ತದೆ. ಆದರೆ ಈ ಪಹಾರಾಹಾಲ್‌ದಲ್ಲಿ ಅಳತೆ ೧೦'x೧೦' ಪೂಟು ಉಳ್ಳದ್ದು ೮' ಪೂಟು ಎತ್ತರವಾಗಿದೆ. ಚಿಕ್ಕದಾದ ಬಾಗಿಲು ಇದ್ದು ಸರಿಯಾದ ಬೆಳಕು ಮತ್ತು ಗಾಳಿಗಳಿಲ್ಲ. ಮೇಲಿನ ಬೆಳಕಿಂಡಿಯಿಂದ ಮಾತ್ರ ಬೆಳಕು ಗಾಳಿ ಬರುತ್ತಿದ್ದು, ಇಂತಹ ಕೋಣೆಯನ್ನು ಸರದಾರ ಮಲಗುವ ಕೋಣೆ ಎಂದು

೭. ಡಾ.ಶಿವರಾಮ ಕಾರಂತರು: "ಕರ್ನಾಟಕದಲ್ಲಿ ಭಿತ್ತಿಚಿತ್ರಕಲೆ" ಪು.೯೦.
೮. ಡಾ.ಯಾದಪ್ಪ ಪರದೇಶಿ: "ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ", ಪು.೨೯೪.
೯. ಪ್ರೊ ಬಿ.ಷೇಕ ಅಲಿ: "ಕರ್ನಾಟಕ ಚರಿತ್ರೆ", ಮಾಲೆ-೬, ಪು. ೨೭೦.

ಕರೆಯುವುದು ಎಷ್ಟು ಸೂಕ್ತವಾದುದು? ಅಷ್ಟೇ ಅಲ್ಲದೇ ಈ ಮನೆತನದವರನ್ನು ಪ್ರಶ್ನಿಸಿದರೆ ಅವರು ಸಹ ಪಹಾರಾ ಹಾಲ್‌ವೆಂದೇ ಹೇಳುತ್ತಾರೆ. ಹೀಗಾಗಿ 'ಪಹಾರಾ ಹಾಲ್' ಅದು ಶಯ್ಯಾಗಾರ ಅಥವಾ ಮಲಗುವಕೋಣೆ ಅಲ್ಲವೆಂದು ಹೇಳಬಹುದು, ಹೆಸರೇ ಹೇಳುವ ಹಾಗೆ ಅದೊಂದು ಕಾವಲುಗಾರನ ಕೋಣೆಯಾಗಿದೆ.

ಹೀಗೆ ನಿಪ್ಪಾಣಿಯ ರಾಜವಾಡೆ ಭಿತ್ತಿಚಿತ್ರಗಳು "ದರ್ಭಾರ್ ಹಾಲ್" ಮತ್ತು "ಪಹಾರಾ ಹಾಲ್" ಗಳ ಭಿತ್ತಿಯಲ್ಲಿ ಕಿರುರೂಪ ಮಾದರಿಯಲ್ಲಿ ವರ್ಣ ಚಿತ್ರಕಲೆ ರಚನೆಗೊಂಡಿದ್ದು ಚಿಕ್ಕದಾದರೂ ಅದು ಗಮನ ಸೆಳೆಯುತ್ತವೆ.

ನಿಪ್ಪಾಣಿಯು ಕರ್ನಾಟಕದ ಬೆಳಗಾಂವಿ ಜಿಲ್ಲೆಯಲ್ಲಿದ್ದು ಮಹಾರಾಷ್ಟ್ರದ ಗಡಿಗೆ ಸಮೀಪದಲ್ಲಿದೆ. ಪ್ರಾರಂಭದಲ್ಲಿ ಬೆಳಗಾಂವಿ ಆಡಳಿತವನ್ನು ಗೋವಾದ ಕದಂಬರು ನಡೆಸುತ್ತಿದ್ದರು. ಕ್ರಿ.ಶ.೧೩೩೦ರಲ್ಲಿ ವಿಜಯನಗರ ಸಾಮ್ರಾಜ್ಯದ ಅಧೀನಕ್ಕೆ ಒಳಪಟ್ಟ ಬೆಳಗಾಂವಿ ಜಿಲ್ಲೆ. ರಾಜಕೀಯವಾಗಿ, ಧಾರ್ಮಿಕವಾಗಿ, ಸಾಂಸ್ಕೃತಿಕವಾಗಿ ಬೆಳೆಯುತ್ತಿದ್ದಂತೆಯೇ ಕ್ರಿ.ಶ.೧೪೩೦ ರಲ್ಲಿ ಬೆಳಗಾಂವಿ ಬಿಜಾಪೂರದ ಆದಿಲ್‌ಷಾಹಿ ಅಡಳಿತಕ್ಕೊಳಪಟ್ಟಿತು. ಅನಂತರ ಕ್ರಿ.ಶ.೧೭೪೦ ರಲ್ಲಿ ಧಾರವಾಡ ಮತ್ತು ಬೆಳಗಾಂವಿ ಪ್ರದೇಶಗಳನ್ನು ಗೆದ್ದುಕೊಂಡು ಪೇಶ್ವೆ ಅವರು ಆಡಳಿತಕ್ಕೊಳಪಡಿಸಿಕೊಂಡರು.[೧೦] ರಾಜಕೀಯವಾಗಿ, ಧಾರ್ಮಿಕವಾಗಿ, ಸಾಂಸ್ಕೃತಿಕವಾಗಿ ಬೆಳವಣಿಗೆ ಹೊಂದುತ್ತಿರುವ ಈ ಪ್ರದೇಶದ ಮೇಲೆ ಬ್ರಿಟೀಷರ ಕಣ್ಣು ಬಿದ್ದಿತು. ಬ್ರಿಟೀಷ್ ಈಸ್ಟ್ ಇಂಡಿಯಾ ಕಂಪನಿ ಒಂದು ಆಯೋಗವನ್ನು ರಚಿಸಿತು. ಅದರ ವರದಿ ಅನ್ವಯ ಕ್ರಿ.ಶ.೧೭೯೯ ಜೂನ್ ೨೨ ರಂದು ಕನ್ನಡ ಪ್ರದೇಶಗಳ ವಿಭಜನೆ ಆಯಿತು. ಈ ಕರಾರಿನ ಉದ್ದೇಶ ನಿಜಾಮರು ಮತ್ತು ಮರಾಠರು ಪ್ರಬಲರಾಗದಂತೆ ತಡೆಯುವುದಾಗಿತ್ತು. ಹಾಗೂ ಮೈಸೂರು ಸಂಸ್ಥಾನದ ಮೇಲೆ ಹಿಡಿತ ಸಾಧಿಸುವ ಉದ್ದೇಶವನ್ನು ಹೊಂದಲಾಗಿತ್ತು. ಇದರಿಂದಾಗಿ ಕರ್ನಾಟಕದ ಅನೇಕ ಪ್ರದೇಶಗಳು ಮುಂಬೈ ಕರ್ನಾಟಕದಲ್ಲಿ ಮರಾಠರ ಅಧೀನಕ್ಕೆ ಒಳಪಟ್ಟವು. ಅಂತೆಯೇ ಹೈದರಾಬಾದ ಕರ್ನಾಟಕದಲ್ಲಿಯ ಅನೇಕ ಪ್ರದೇಶಗಳು ನಿಜಾಮರ ಅಡಳಿತಕ್ಕೆ ಒಳಪಟ್ಟವು. ಕ್ರಿ.ಶ.೧೮೦೦ರ ಹೊತ್ತಿಗೆ ಬ್ರಿಟೀಷರ ಕೈಸೇರಿದ ಕನ್ನಡ ಪ್ರದೇಶ (ಉತ್ತರ ಕನ್ನಡ) ಕಾರವಾರವನ್ನು ತಮ್ಮ ಅಧೀನಕ್ಕೆ ತೆಗೆದುಕೊಂಡರು. ಕ್ರಿ.ಶ.೧೮೧೮ ರಲ್ಲಿ ಪೇಶ್ವೆ ಎರಡನೆಯ ಬಾಜೀರಾಯ್‌ನನ್ನು ಸೋಲಿಸಿ ಮುಂಬೈ ಕರ್ನಾಟಕದ ಜಿಲ್ಲೆಗಳು ಹಾಗೂ ಸಂಸ್ಥಾನಗಳನ್ನು ವಶಪಡಿಸಿಕೊಂಡರು. ಈ ವೇಳೆಯಲ್ಲಿರುವ ಸಣ್ಣಪುಟ್ಟ ಸಂಸ್ಥಾನಗಳು ಬ್ರಿಟೀಷರ ವಿರುದ್ಧ ಹೋರಾಟಕ್ಕೆ ಸಿದ್ಧವಾದವು. ಇದೇ ಸಂದರ್ಭದಲ್ಲಿ ಅಂದರೆ ಕ್ರಿ.ಶ.೧೮೧೮ರಲ್ಲಿ ಎರಡನೆಯ ಪೇಶ್ವೆ ಬಾಜೀರಾಯ್

---

೧೦. ಶ್ರೀ ಸಿ.ಚಂದ್ರಪ್ಪ: ಬೆಳಗಾಂವ್ ಇತಿಹಾಸ, ಪು.೨೭೦.

ಅವರ ಜೊತೆ ಕೂಡಿಕೊಂಡು ಬಲಿಷ್ಠ ಬ್ರಿಟೀಷರನ್ನು ಹಿಮ್ಮೆಟ್ಟಿಸಲು ಯುದ್ಧವನ್ನು ಮಾಡಿ ಸೋಲುಂಡರು.[೧೧] ಆದರೆ ನಿಪ್ಪಾಣಿ ಸಂಸ್ಥಾನದ ಮೂಲ ಪುರುಷ ಸಿದ್ಧೋಜಿರಾವ್ ನಿಂಬಾಳಕರ್ ದೇಸಾಯಿಯವರ ರಾಜಕೀಯ, ಧಾರ್ಮಿಕ ಮತ್ತು ಸಾಂಸ್ಕೃತಿಕ ಆಡಳಿತವನ್ನು ಗಮನಿಸಿದಾಗ ಲಲಿತಕಲೆಗಳಿಗೆ ಅದರಲ್ಲೂ ವಾಸ್ತು ನಿರ್ಮಾಣ ಮತ್ತು ಭಿತ್ತಿ ಚಿತ್ರಗಳಿಗೆ ಕೊಟ್ಟಿರುವ ಪ್ರೋತ್ಸಾಹವು ಗಮನಾರ್ಹವಾದುದಾಗಿದೆ.

**ನಿಪ್ಪಾಣಿವಾಡೆ ರಚನೆ :**

ನಿಪ್ಪಾಣಿ ನಗರದ ಮಧ್ಯದಲ್ಲಿ ಇರುವ ನಿಂಬಾಳಕರ್ ರಾಜವಾಡೆ. ವಾಡೆ ಎಂದರೆ "ಅರಮನೆ" ಎಂದರ್ಥ. ಈ ಭವ್ಯವಾದ ಅರಮನೆಯು ಸುಮಾರು ೧೮ ಗುಂಟೆ ಸುತ್ತಳತೆಯಿಂದ ಕೂಡಿದೆ. ಈ ವಾಡೆಗೆ ಕಿರಿದಾದ ಬೀದಿಯನ್ನು ಹೊಂದಿದ್ದು, ಈ ಬೀದಿಯಲ್ಲಿ ನಿಂತರೆ ಕೋಟೆಯ ಮಹಾದ್ವಾರ ಕಾಣಿಸುತ್ತದೆ. ಶಿಥಿಲವಾದ ಕೋಟೆ ಬಹು ಎತ್ತರವಾದ ಭವ್ಯವಾದ ಮಹಾದ್ವಾರ. ದಿಡ್ಡಿಬಾಗಿಲು ಮೇಲೆ ನಗಾರ್‌ಖಾನೆ. ಈ ಮಹಾದ್ವಾರವನ್ನು ದಾಟಿ ಮುಂದೆ ಬಂದರೆ ಕಲ್ಲಿನ ಮಹಾದ್ವಾರ. ಅಲ್ಲಿ ನಿಂತುಕೊಂಡು ನೋಡಿದರೆ ಭವ್ಯವಾದ ಹಾಗೂ ಸುಂದರವಾದ ಅರಮನೆ ಮೇಲ್ಗಡೆಯಲ್ಲಿ ದರ್ಬಾರ್ ಹಾಲ್ (ಸಭಾಂಗಣ). ಇದರ ಮುಂದುಗಡೆ ದೊಡ್ಡದಾದ ಅಂಗಳ. ಅಂಗಳದ ಮಧ್ಯದಲ್ಲಿ ನೀರಿನ ಕಾರಂಜಿ. ಈ ಅರಮನೆಯ ಒಳಗಡೆ ಹೋದರೆ ಚೌರಸ ಆಕಾರದಲ್ಲಿರುವ ಅಂಗಳ. ಸುತ್ತಲೂ ಪಡಸಾಲೆ (ಕೈಸಾಲೆ) ಎದುರಿನ ಪಡಸಾಲೆಯ ಮಧ್ಯದಲ್ಲಿ ರಾಜವಾಡೆಯವರ ಅಂದರೆ ಸಿದ್ಧೋಜಿರಾವ್ ನಿಂಬಾಳಕರ್ ಅವರ ಮನೆಯ ದೇವರುಕೋಣೆ ಇದ್ದುದು ಕಂಡುಬರುತ್ತದೆ.[೧೨]

ಸುಮಾರು ಎರಡನೂರಾ ಮೂವತ್ತೂರು ವರ್ಷಗಳ ಹಿಂದೆ ನಿಪ್ಪಾಣಿನಗರವನ್ನು ಸ್ಥಾಪಿಸಿದ ಸರ್ದಾರ್ ಸಿದ್ಧೋಜಿರಾವ್ ನಿಂಬಾಳಕರ್ ದೇಸಾಯಿಯವರು ತಮಗೆ ವಾಸಿಸಲು ಒಂದು ಅರಮನೆ (ವಾಡೆ) ಯೊಂದನ್ನು ಕಟ್ಟಿಸಿದ್ದು, ಈ ಅರಮನೆಯನ್ನು ಕಟ್ಟುವವರಿಗೆ ಅಂದರೆ ಬಡಿಗೇರರು, ಅಕ್ಕಸಾಲಿಗರು, ಪೂಜಾರಿಗಳು, ನೃತ್ಯಗಾರರು ಚಿತ್ರ ಕಲಾವಿದರು ಈ ಅರಮನೆಯ ಕಾರ್ಯದಲ್ಲಿ ತೊಡಗಿದ ಇವರೆಲ್ಲರಿಗೂ ನೂರಾರು ಎಕರೆ ಭೂಮಿಯನ್ನು ದಾನವಾಗಿ ನೀಡಿರುವುದು ತಿಳಿದು ಬರುತ್ತದೆ. ಈ ಅರಮನೆಯು ಸುಂದರವಾಗಿಯೂ, ಭವ್ಯವಾಗಿಯೂ ರಚನೆಗೊಂಡಿದ್ದು, ಮರದ ಕೆತ್ತನೆಯಾಗಲಿ, ನೀರಿನ ವ್ಯವಸ್ಥೆಯಾಗಲಿ, ಈ ಅರಮನೆಯ ಹಿಂಬಾಗದ ಮಹಡಿಯಲ್ಲಿ ಈಜುಕೊಳವೊಂದಿದೆ. ಅಲ್ಲಿಗೆ ನೀರು ಸಾಗಿಸುವ ವ್ಯವಸ್ಥೆಯಿದೆ. ಅಲ್ಲಿನ ಕಲಾತ್ಮಕವಾದ ಎಂಜನೀಯರ್ ಮತ್ತು ತಂತ್ರಜ್ಞರ ರಚನಾ ಕೌಶಲ್ಯವನ್ನು ನೋಡಿದರೆ ಯಾರಿಗಾದರೂ ಆಶ್ಚರ್ಯವಾಗದಿರಲಾರದು.

---

೧೧. ಪ್ರೊ ಜಿ.ಷೇಕ ಅಲಿ: "ಕರ್ನಾಟಕ ಚರಿತ್ರೆ", ಮಾಲೆ-೬.

೧೨. ಶ್ರೀ.ಪಿ.ಆರ್.ತಿಪ್ಪೇಸ್ವಾಮಿ: "ಕಲಾವಿದನ ನೆನಪುಗಳು", ಪು. ೧೯೯.

ಈ ಅರಮನೆಯ "ದರ್ಬಾರ್ ಹಾಲ್" (ಸಭಾ ಮಂದಿರ) "ಪಹಾರಾ ಹಾಲ್" (ಕಾವಲುಗಾರನ ಕೋಣೆ)ಗಳಂತಹ ವಿಭಾಗಗಳನ್ನು ಮಾಡಿಕೊಂಡು. ನೂರಾರು ಕೋಣೆಗಳುಳ್ಳ ಭವ್ಯವಾದ ಅರಮನೆಯು ವಿಶಾಲವಾದ ಅಂಗಳ (ಕೈಸಾಲೆ) ಪಡಸಾಲೆಗಳು ಗಾಳಿ ಬೆಳಕುಗಳಿಂದ ಸಂಪೂರ್ಣ ಅರಮನೆ ಸುಂದರವಾಗಿ ಮೂಡಿ ಬಂದಿದೆ. ಈ ಅರಮನೆಯ ದರ್ಬಾರ್ ಹಾಲ್ ಮತ್ತು ಪಹಾರಾ ಹಾಲದಲ್ಲಿ ಕಿರುರೂಪದ ಭಿತ್ತಿಚಿತ್ರಗಳನ್ನು ಬರೆದ ಕಲಾವಿದರು. ಅರಮನೆಯ ಅಂದವನ್ನು ಇಮ್ಮಡಿಗೊಳಿಸಿರುವರು. ಇವೆಲ್ಲ ಐತಿಹಾಸಿಕ ಮಹತ್ವವನ್ನು ಸಾರುವ ಇಂದಿನ ತಂತ್ರಜ್ಞರಿಗೂ ಸವಾಲಾಗಿರುವ ಅಂಶಗಳನ್ನು ಮನಗಾಣಬಹುದಾಗಿದೆ. ನಿಪ್ಪಾಣಿ ನಗರ ರಚನೆ ಮತ್ತು ನಿಂಬಾಳಕರ್ ವಾಡೆಯ ನಿರ್ಮಾತೃಧಾರ ಶ್ರೀ ಸಿದ್ಧೋಜಿರಾವ್ ನಿಂಬಾಳಕರ್ ದೇಸಾಯಿ ಅವರ ಪ್ರಾಂತದಲ್ಲಿ ಸುಮಾರು ಅರವತ್ತು ಹಳ್ಳಿಗಳು ಸೇರ್ಪಡೆಗೊಂಡಿದ್ದು, ಸ್ವತಃ ಸಿದ್ಧೋಜಿರಾವ್ ನಿಂಬಾಳಕರ್ ಅವರೇ ೩.೫೦೦ ಎಕರೆ ಭೂಮಿಯನ್ನು ಹೊಂದಿದ್ದರೆಂದೂ ತಿಳಿದುಬರುತ್ತದೆ.

**ನಿಪ್ಪಾಣಿವಾಡೆ ಭಿತ್ತಿಚಿತ್ರಗಳು:** ಎರಡು ಅಂತಸ್ತುಗಳುಳ್ಳ ಈ ವಾಡೆ ಭವ್ಯವಾದುದಾಗಿದೆ. ಎದುರಿನಲ್ಲಿ ವಿಶಾಲವಾದ ಪಡಸಾಲೆ (ಕೈಸಾಲೆ) ಅದರ ಬೆನ್ನಿಗೆ (ಹಿಂದುಗಡೆ) ನಾಲ್ಕೂ ಕಡೆಗಳಲ್ಲಿ ಪಡಸಾಲೆ. ಈ ಪಡಸಾಲೆಯಲ್ಲಿ ಹಲವಾರು ಕೋಣೆಗಳು, ಪಡಸಾಲೆ ಮತ್ತು ಕೋಣೆಗಳ ಮೇಲೆ ಅದೇ ರೀತಿಯಲ್ಲಿರುವ ಮತ್ತೊಂದು ಅಂತಸ್ತು ಅದು ಕೆಳಗಿನ ಕಟ್ಟಡದ ಪ್ರತಿರೂಪದಂತಿದೆ. ಹೀಗೆ ಎರಡು ಅಂತಸ್ತುಗಳನ್ನು ಹೊಂದಿದ ಭವ್ಯವಾದ ಕಟ್ಟಡವಾಗಿರುವ ಈ ವಾಡೆ. ಮಧ್ಯದಲ್ಲಿ ತೆರೆದ ಅಂಗಳವನ್ನು ಹೊಂದಿದ್ದು, ಗಾಳಿ, ಬಿಸಿಲು, ಬೆಳಕುಗಳು ಬರುವಂತಾಗಿ ವಾಡೆಯ ಅಂದವನ್ನು ಹೆಚ್ಚಿಸಿದೆ. ಈ ಅಂಗಳದ ಮಧ್ಯದಲ್ಲಿ ಈ ಮನೆತನದ ಕುಲದೇವತೆಯಾದ ಅಂಬಾಭವಾನಿಯ ಮಂಟಪವನ್ನು ರಚಿಸಿದ್ದಾರೆ. ವಾಡೆಯ ಕೆಳಅಂತಸ್ತುಗಳಲ್ಲಿ ಯಾವುದೇ ಚಿತ್ರಗಳಿಲ್ಲ. ಎಲ್ಲಾ ಚಿತ್ರಗಳು ಮೇಲಂತಸ್ಥಿನ "ದರ್ಭಾರ್ ಹಾಲ್" ಮತ್ತು "ಪಹಾರಾ ಹಾಲ್"ದಲ್ಲಿವೆ. ಇಲ್ಲಿಯ ಚಿತ್ರಗಳನ್ನು ಎರಡು ರೀತಿಯಲ್ಲಿ ವಿಂಗಡಣೆ ಮಾಡಿಕೊಂಡು ಅಧ್ಯಯನ ಮಾಡಲಾಗಿದೆ.

೧. ದರ್ಭಾರ್ ಹಾಲ್ (ಸಭಾಂಗಣ)ನ ಭಿತ್ತಿಚಿತ್ರಗಳು

೨. ಪಹಾರಾ ಹಾಲ್ (ಕಾವಲುಗಾರನ ಕೋಣೆ)ನ ಭಿತ್ತಿ ಚಿತ್ರಗಳು

## ನಿಪ್ಪಾಣಿವಾಡೆ ಭಿತ್ತಿಚಿತ್ರಗಳು

**I ದರ್ಬಾರ್ ಹಾಲ್‌ದಲ್ಲಿಯ ಭಿತ್ತಿಚಿತ್ರಗಳು**

**II ಪಹಾರಾ ಹಾಲ್‌ದಲ್ಲಿಯ ಭಿತ್ತಿ ಚಿತ್ರಗಳು**

### I ನೆಯ ವಿಭಾಗ ದರ್ಬಾರ್ ಹಾಲ್‌ದಲ್ಲಿಯ ಭಿತ್ತಿಚಿತ್ರಗಳು

**ದೊಡ್ಡ ಮಾಡುಗಳ ಭಿತ್ತಿ ಚಿತ್ರಗಳು**

I ಭಕಪಕ್ಷಿಯನ್ನು ವಧೆ ಮಾಡುತ್ತಿರುವ ಶ್ರೀಕೃಷ್ಣ

II ಗೋಪಿಕಾ ಸ್ತ್ರೀಯರೊಂದಿಗೆ ಶ್ರೀಕೃಷ್ಣ

**ಚಿಕ್ಕಮಾಡುಗಳ ಭಿತ್ತಿಚಿತ್ರಗಳು**

೧. ತಪೋನಿರತ ತುಳುಜಾಭವಾನಿ

೧. ರಾಸಲೀಲೆಯಲ್ಲಿ ತೊಡಗಿರುವ ಶ್ರೀಕೃಷ್ಣ

**II ಅ. ರಾಜಕುಮಾರಿಯರ ಚಿತ್ರಗಳು**

೧. ಸಾಳ್ವಪಕ್ಷಿಯೊಂದಿಗಿರುವ ರಾಜಕುಮಾರಿ

೨. ಜಿಂಕೆಗೆ ತಪ್ಪಲು ತಿನ್ನಿಸುತ್ತಿರುವ ರಾಜಕುಮಾರಿ

೩. ಇನಿಯನ ನಿರೀಕ್ಷೆಯಲ್ಲಿರುವ ರಾಜಕುಮಾರಿ

೪. ಇನಿಯನಿಗೆ ಸಂದೇಶ ಕಳಿಸುತ್ತಿರುವ ರಾಜಕುಮಾರಿ

೫. ಯೋಚನಾಮಗ್ನಳಾದ ರಾಜಕುಮಾರಿ

೬. ನೃತ್ಯಭಂಗಿಯಲ್ಲಿರುವ ರಾಜಕುಮಾರಿ

**ದೊಡ್ಡ ಮಾಡುಗಳ ಭಿತ್ತಿಚಿತ್ರಗಳು**

**ಚಿಕ್ಕಮಾಡುಗಳ ಭಿತ್ತಿಚಿತ್ರಗಳು**

**II ಬ. ಸ್ಥಳೀಯ ಪ್ರಭಾವದ ಚಿತ್ರಗಳು**

೧. ಬಿಂಗರಿ ಆಡಿಸುತ್ತಿರುವ ರಾಧೆ

೨. ಆರತಿಯೊಂದಿಗೆ ಬರುತ್ತಿರುವ ರುಕ್ಮಿಣಿ

೩. ಯಶೋಧರೆಯೊಂದಿಗೆ ಬಾಲಕ ಕೃಷ್ಣ

೪. ಗೌಳಗಿತ್ತಿಯ ಕಲಾಕೃತಿ

೫. ಹಾಲನ್ನು ಹಿಂಡುತ್ತಿರುವ ಮಹಿಳೆ

೬. ಕಾಯಿಪಲ್ಲೆ ಮಾರುತ್ತಿರುವ ದೃಶ್ಯ.

**II ಕ. ಪ್ರಾಂತೀಯ ಸರ್ಧಾರ್‌ರು**

೧. ಮರಾಠಾ ಯೋಧ

೨. ಸುಲ್ತಾನ್ ಯೋಧ

೩. ರಜಪೂತ ಯೋಧ

೪. ಮೊಘಲ್ ಯೋಧ

೫. ಮೈಸೂರು ಯೋಧ

೬. ದಖ್ಖನ್ ಯೋಧ

**III. ತುಳಜಾಭವಾನಿ ದೇವಸ್ಥಾನದ ಹೆಬ್ಬಾಗಿಲು**

**III. ಅ. ರಾಜಕುಮಾರರ ಚಿತ್ರಗಳು**

೧. ಮರಾಠಾ ರಾಜಕುಮಾರ

೨. ಬ್ರಿಟೀಷ ರಾಜಕುಮಾರ

೩. ರಜಪೂತ್ ರಾಜಕುಮಾರ

೪. ಮೊಘಲ್ ರಾಜಕುಮಾರ

೫. ದಖ್ಖನ್ ರಾಜಕುಮಾರ

೬. ಜಪಾನ್ ರಾಜಕುಮಾರ

**III. ಬ. ಸಂಕೀರ್ಣ ಚಿತ್ರಗಳು**

೧ ಶಿವಭಕ್ತ

೨. ಶಿವಶರಣೆ

೩. ವಿಷ್ಣುವಿನ ಭಕ್ತ

೪. ಸಿಖ್ಖರ ಗುರು

೫. ಗೋಪಾಲನೊಂದಿಗೆ ರಾಧೆ ರುಕ್ಮಿಣಿಯರು

೬. ಧ್ಯಾನಾಸಕ್ತಳಾದ ಪಾರ್ವತಿ

**III. ಕ. ದೇವಾಲಯಗಳು**

೧. ಶಿವದೇವಾಲಯ

೨. ಆಂಜನೇಯ ದೇವಾಲಯ

೩. ತುಳುಜಾ ಭವಾನಿ ದೇವಾಲಯ

೪. ಶ್ರೀಕೃಷ್ಣ ಸತ್ಯಭಾಮೆಯರ ಸಂಭಾಷಣೆ

೫. ಶಿವಪಾರ್ವತಿಯರ ಚಿತ್ರ

೬. ಮಹಿಷಾಸೂರ ಮರ್ಧಿನಿ

**IV. ಹೂದಾನಿಯೊಂದಿಗಿರುವ ಹಂಸಪಕ್ಷಿಗಳು**

೧. ಅಂತಃಪುರದಲ್ಲಿ ರಾಜಕುಮಾರಿ ಮತ್ತು ಮಗು

೨. ಸುರಪಾನ ಪ್ರಿಯ ಅರಸ

೩. ರುಕ್ಮಿಣಿಗೆ ಪಾರಿಜಾತ ಪುಷ್ಪ ನೀಡುತ್ತಿರುವ ಶ್ರೀಕೃಷ್ಣ

## II ನೆಯ ವಿಭಾಗ ಪಹಾರಾಹಾಲ್‌ದಲ್ಲಿಯ ಭಿತ್ತಿಚಿತ್ರಗಳು

**I ಮೂರಂತಸ್ತಿನ ಅರಮನೆಯ ದೃಶ್ಯ**

೧. ಅರಮನೆಯ ಕೆಳಅಂತಸ್ತಿನ ಚಿತ್ರ

೨. ರುಕ್ಮಿಣಿಯೊಂದಿಗೆ ರಾಸಲೀಲೆಯಲ್ಲಿರುವ ಕೃಷ್ಣ

೩. ಅರಮನೆಯ ಮೇಲಂತಸ್ತಿನ ಚಿತ್ರ

೪. ಯುದ್ಧಕ್ಕೆ ಹೊರಟ ಕೃಷ್ಣನನ್ನು ಬೀಳ್ಕೊಡುತ್ತಿರುವ ರುಕ್ಮಿಣಿ

೫. ಮದ್ಯ ಅಂತಸ್ತಿನ ಬಯಲು ಗ್ಯಾಲರಿ

೬. ಪ್ರಣಯ ನಿರತ ಕೃಷ್ಣನನ್ನು ಕಂಡು ವಿಸ್ಮಯಳಾದ ರಾಧೆ

**II**. ಅರಮನೆಯ ಮುಂದೆ ವಸಂತೋತ್ಸವದ ದೃಶ್ಯ ೧. ಬಣ್ಣದೋಕುಳಿಯ ದೃಶ್ಯ ೨. ಕೃಷ್ಣನ ರಾಸಲೀಲೆಯನ್ನು ನೋಡುತ್ತಿರುವ ಸಖಿಯರು. ೩. ಯಜ್ಞಯಾಗದ ದೃಶ್ಯ.

**ದರ್ಬಾರ್ ಹಾಲ್‌ದಲ್ಲಿಯ ಭಿತ್ತಿಚಿತ್ರಗಳು :**

ಈ ವಾಡೆಯ ಎರಡನೇ ಅಂತಸ್ತಿನ ಮುಂಭಾಗಕ್ಕೆ ದರ್ಬಾರ್ ಹಾಲ್ ಅಥವಾ ಸಭಾಂಗಣ, ರಂಗಮಹಲ್ ಸಭಾಭವನವೆಂದೂ ಕರೆಯುತ್ತಾರೆ. ಇದು ಸರ್ದಾರರ ಓಲಗಶಾಲೆಯಾಗಿದ್ದಿರಬೇಕು. ಅದು ಸುಮಾರು ನೂರಿನ್ನೂರು ಜನ ಕುಳಿತುಕೊಳ್ಳಬಹುದಾದ ಸಭಾಂಗಣವಾಗಿದ್ದು, ಅದಕ್ಕೆ ಮೂರು ಕಡೆಗಳಲ್ಲಿ ಗೋಡೆಗಳಿದ್ದು, ಮುಂಭಾಗ ತೆರವಾಗಿದೆ. ಗೋಡೆಗಳ ತಳದಿಂದ ನಾಲ್ಕೈದು ಫೂಟಗಳಷ್ಟು ಎತ್ತರದಲ್ಲಿ ಮಾಡುಗಳನ್ನು ನಿರ್ಮಿಸಿದ್ದು, ಈ ಮಾಡುಗಳನ್ನು ಮಣ್ಣಿನ ಗಾರೆಯಿಂದ ರಚಿಸಿದ್ದು, ಅಲಂಕಾರಿಕ ಚೌಕಟ್ಟುಗಳನ್ನು ಮಾಡಿಕೊಳ್ಳಲಾಗಿದೆ. ಸಭಾಂಗಣದ ಹಿಂದಿನ ಗೋಡೆಗೆ ಹೊಂದಿಕೊಂಡು ಪಹಾರಾಹಾಲ್ ಇದೆ. ಈ ಕಾವಲುಗಾರನ ಕೋಣೆಗೆ ಹೊಂದಿಕೊಂಡಿರುವ ಗೋಡೆಯಲ್ಲಿಯ ಮಾಡುಗಳಲ್ಲಿ ಮಾತ್ರ ಈಗ ಚಿತ್ರಗಳು ಉಳಿದುಕೊಂಡಿದ್ದು, ಸಭಾಂಗಣದ ಎಡಬಲದ ಗೋಡೆಗಳಲ್ಲಿಯ ಮಾಡುಗಳಲ್ಲಿರುವ ಚಿತ್ರಗಳು ನಾಶವಾಗಿವೆ. ಸಭಾಂಗಣದ ಗೋಡೆಗಳಲ್ಲಿ ಪ್ರಮುಖವಾದ ಮಾಡುಗಳು ೫೫"x೬೦" ಇಂಚು ಅಳತೆಯನ್ನು ಹೊಂದಿದ್ದು, ಚಿತ್ರರಚನೆಗೊಂಡ ಒಳಭಾಗವು ೩೪"x೨೨" ಇಂಚು ಅಳತೆಯಲ್ಲಿದೆ. ಇಂತಹ ಮಾಡುಗಳು ಒಟ್ಟು ೨೩ ಇದ್ದು, ಪೂರ್ವಗೋಡೆಯಲ್ಲಿ ೮ ಮತ್ತು ಪಶ್ಚಿಮಗೋಡೆಯಲ್ಲಿ ೮ ಮಾಡುಗಳಿದ್ದರೆ ದಕ್ಷಿಣದ ಗೋಡೆಯಲ್ಲಿ ೭ ಮಾಡುಗಳು ಇರುವವು. ಈಗ ದಕ್ಷಿಣದ ೭ ಮಾಡುಗಳಲ್ಲಿ ಮಾತ್ರ ಚಿತ್ರಗಳಿವೆ. ಈ ಪ್ರಮುಖ ಮಾಡುಗಳ ಎಡಗಡೆ ಮತ್ತು ಬಲಗಡೆಯಲ್ಲಿ ೮"x೧೬" ಇಂಚು ಅಳತೆಯ ಮಾಡುಗಳಿದ್ದು ಮೇಲಿನ ಭಾಗದಲ್ಲಿ ಅಡ್ಡವಾಗಿ ೭"x೨೨" ಇಂಚು ಅಳತೆಯ ಮಾಡುಗಳಿದ್ದು

೮"x೧೨" ಇಂಚು ಅಳತೆಯ ತ್ರಿಕೋನ ಆಕಾರದ ಮಾಡುಗಳನ್ನು ಮಾಡಿದ್ದು, ಇವುಗಳ ಒಳಗಡೆ ಭಿತ್ತಿಚಿತ್ರಗಳನ್ನು ರಚಿಸಲಾಗಿದೆ. ಒಟ್ಟು ಕಲಾಕೃತಿಗಳ ಹೊರಗಿನ ಅಂಚಿನಲ್ಲಿ ಉಬ್ಬುಗೆತ್ತನೆಯ ನಕ್ಷೆಗಳನ್ನು ಸುಣ್ಣದ ಗಾರೆಯಲ್ಲಿ ಮಾಡಿದ್ದು ಮಾಡುಗಳಿಗೆ ಕಮಾನುಗಳನ್ನು ಮತ್ತು ಕಂಬಗಳನ್ನು ಹಾಗೂ ನಕ್ಷೆಗಳನ್ನು ಸುಣ್ಣದ ಗಾರೆಯಲ್ಲಿ ರಚಿಸಿರುವರು. ೮"x೮" ಇಂಚುಗಳಲ್ಲಿ ಹೂವಿನ ನಕ್ಷೆಗಳನ್ನು ಮಾಡಿದ್ದು, ಕಲಾಕೃತಿಯ ಎಡಬಲಭಾಗಗಳಲ್ಲಿವೆ. ಹೀಗೆ ವಿವಿಧ ಆಕಾರಗಳಲ್ಲಿ ರಚನೆಗೊಂಡಿರುವ ಮಾಡುಗಳಲ್ಲಿ ಭಿತ್ತಿಚಿತ್ರಗಳು ಚಿಕ್ಕಪ್ರಮಾಣದವುಗಳು ಆಗಿರುವುದರಿಂದ ಅತ್ಯಂತ ಸೂಕ್ಷ್ಮವಾದ ವರ್ಣಗಳನ್ನು ಬಳಸಲಾಗಿದೆ. ಆದರೆ ಈಗ ಕೆಲವೇ ಭಿತ್ತಿಚಿತ್ರಗಳು ಉಳಿದುಕೊಂಡಿದ್ದು, ಬಹಳಷ್ಟು ಕಡೆ ಈ ಭಿತ್ತಿಚಿತ್ರಗಳ ಮೇಲೆ ಗೀಚುಗಳನ್ನು ಹಾಕಿದ್ದು ಕಂಡುಬರುತ್ತದೆ. ಈ ದರ್ಭಾರ್ ಹಾಲ್‌ದಲ್ಲಿಯ ಚಿತ್ರಗಳನ್ನು ಅಧ್ಯಯನದ ಅನುಕೂಲಕ್ಕಾಗಿ ಎರಡು ರೀತಿಯಲ್ಲಿ ವಿಂಗಡಿಸಿಕೊಳ್ಳಲಾಗಿದೆ.

೧. ದೊಡ್ಡ ಮಾಡುಗಳಲ್ಲಿಯ ಭಿತ್ತಿಚಿತ್ರಗಳು

೨. ಚಿಕ್ಕ ಮಾಡುಗಳಲ್ಲಿಯ ಭಿತ್ತಿಚಿತ್ರಗಳು

ಚೌರಸ, ಆಯತ, ತ್ರಿಕೋನ ಹೀಗೆ ವಿವಿಧ ಆಕಾರಗಳನ್ನು ಒಳಗೊಂಡ ಮಾಡುಗಳಿವೆ.

**೧. ದೊಡ್ಡ ಮಾಡುಗಳಲ್ಲಿಯ ಭಿತ್ತಿ ಚಿತ್ರಗಳು :**

ಸಭಾಂಗಣದ ಗೋಡೆಗಳಲ್ಲಿ ಅಲಂಕಾರಿಕವಾಗಿರುವ ದೊಡ್ಡ (ಪ್ರಮುಖ) ದಾದ ಮಾಡುಗಳು. ೫೫"x೬೦"ಇಂಚು ಹೊರಮಾಡಿನ ಅಳತೆಯನ್ನು ಹೊಂದಿದ್ದು, ಮಾಡಿನ ಒಳಗಡೆಯ ಚಿತ್ರಿತ ಭಾಗವು ೩೪"x೨೨" ಇಂಚು ಅಳತೆಯನ್ನು ಹೊಂದಿವೆ. ಈ ಚಿತ್ರಗಳ ವಸ್ತು, ವಿಷಯ, ವೈಶಿಷ್ಠತೆಗಳು ಕೆಳಗಿನಂತಿವೆ.

**I ಬಕಪಕ್ಷಿಯನ್ನು ವಧೆಮಾಡಿದ ಶ್ರೀಕೃಷ್ಣ :**

ಬಲರಾಮ ಮತ್ತು ಶ್ರೀಕೃಷ್ಣರಿಬ್ಬರೂ ಬೃಂದಾವನದಲ್ಲಿ ಆನಂದವಾಗಿ ಬಾಲ್ಯಜೀವನವನ್ನು ಕಳೆಯುತ್ತಿರುವುದನ್ನು ಅರಿತ ಕಂಸನು ಈ ಕೃಷ್ಣನನ್ನು ಹೇಗಾದರೂ ಮಾಡಿ ಕೊಲ್ಲಿಸಬೇಕೆಂದು ಅನೇಕ ರಾಕ್ಷಸರನ್ನು ವಿವಿಧ ವೇಷಗಳಲ್ಲಿ ಕಳಿಸತೊಡಗಿದನು. ಅದರಲ್ಲಿಯ ಒಂದು ಸನ್ನಿವೇಶ ಇದಾಗಿದ್ದು. ಶ್ರೀಕೃಷ್ಣನು ದನಕಾಯುವ ಹುಡುಗರೊಂದಿಗೆ ಗೋವುಗಳನ್ನು ಮೇಯಿಸುತ್ತ ಯಮುನಾ ನದಿಯ ದಡದಲ್ಲಿರುವಾಗ ಭಕನೆಂಬ ರಾಕ್ಷಸನು ಪಕ್ಷಿಯ ವೇಷದಲ್ಲಿ ಬಂದು ತನ್ನ ಕೊಕ್ಕಿನಿಂದ ಗೋವುಗಳನ್ನು ಮತ್ತು ಗೋಪಾಲಕರನ್ನು ಕುಕ್ಕಿ ಕುಕ್ಕಿ ಕೊಲ್ಲತೊಡಗಿದನು. ಇದನ್ನು ಕಂಡ ಶ್ರೀಕೃಷ್ಣನು ಈ ಭಕಪಕ್ಷಿಯೊಂದಿಗೆ ಹೋರಾಟ ಮಾಡಿ. ಆ ಪಕ್ಷಿಯ ಕೊಕ್ಕುಗಳನ್ನೇ ಸೀಳಿ ಬೀಸಾಕುವ ಸನ್ನಿವೇಶ ಇದಾಗಿದ್ದು, ನೀಲವರ್ಣದ ಕೃಷ್ಣನು ಕಿರೀಟವನ್ನು ಧರಿಸಿದ್ದು ಭುಜದ ಮೇಲೆ ಹಳದಿವರ್ಣದ ಶಾಲು ಹಾಕಿಕೊಂಡಿದ್ದು ಭಕಪಕ್ಷಿಯೊಂದಿಗೆ

ಹೋರಾಟ ಮಾಡುವ ದೃಶ್ಯವನ್ನು ಗಾಭರಿಯಾಗಿ ನೋಡುತ್ತ ನಿಂತಿರುವ ನಾಲ್ಕು ಜನ ದನಕಾಯುವ ಗೋಪಾಲಕರು ಈ ಗೋಪಾಲಕರು, ತಲೆಯ ಮೇಲಿಂದ ಕೆಳಗಿನಪಾದದವರೆಗೆ ಕುಲಾಯಿಯ ರೂಪದಲ್ಲಿ ಕಂಬಳಿಯನ್ನು ಹೊತ್ತುಕೊಂಡು ಕೈಯಲ್ಲಿ ಉದ್ದವಾದ ಕೋಲುಗಳ (ಬಡಗಿ)ನ್ನು ಹಿಡಿದುಕೊಂಡಿದ್ದು, ಬರೀ ಚಡ್ಡಿಯನ್ನು ಮಾತ್ರ ಧರಿಸಿರುವರು. ಈ ಗೋಪಾಲಕರ ಎದುರಿನಲ್ಲಿ ದನಗಳ ಗುಂಪೇ ಇದೆ. ದೂರದ ಹಿನ್ನೆಲೆಯನ್ನು ಹೊಂದಿದ ಈ ಚಿತ್ರ ನೀಲಿ ಆಕಾಶ, ಹಸಿರು ಬಣ್ಣದ ಗಿಡಮರಗಳು ಕೆಂಪುಬಣ್ಣದ ಮುನ್ನೆಲೆ ಚಿತ್ರದ ಮುಕ್ಕಾಲುಭಾಗ ದನಕರುಗಳನ್ನು ಒಂದರ ಹಿಂದೊಂದರಂತೆ ಚಿತ್ರಿಸಲಾಗಿದೆ. ಈ ದನಕರುಗಳು ವಿವಿಧ ಭಂಗಿಯಲ್ಲಿರುವುದನ್ನು ಚೆನ್ನಾಗಿ ಸೆರೆಹಿಡಿದ ಕಲಾವಿದನ ರೇಖೆಗಳು ಶಕ್ತಿಯುತವಾಗಿ ಜೀವಂತವಾಗಿ ಮೂಡಿಬಂದಿವೆ. ಚಿತ್ರದ ಮುಂಭಾಗದಲ್ಲಿ ನದಿಯನ್ನು ತೆಳುವಾದ ನೀಲಿಯ ಬಣ್ಣದಲ್ಲಿ ತೋರಿಸಿದ್ದು ಅದರಲ್ಲಿ ನೀರಿನ ಅಲೆಗಳನ್ನು, ಮೀನುಗಳನ್ನು ತೋರಿಸುವ ರೀತಿ ಕುತೂಹಲಕಾರಿಯಾಗಿದೆ. ಸಮೀಪದೂರ ತೋರಿಸುವುದರಲ್ಲಿ ಈ ಚಿತ್ರವು ಬಹಳ ಪರಿಣಾಮಕಾರಿಯಾಗಿ ಮೂಡಿಬಂದಿದೆ. ಅಲ್ಲದೇ ಒಟ್ಟು ಚಿತ್ರದ ವಿವಿಧ ಆಕೃತಿಗಳನ್ನು ವಿನ್ಯಾಸಗೊಳಿಸಿದ ಬಗೆ ಅಂದರೆ ಸಂಯೋಜನಾ ವಿನ್ಯಾಸ ವರ್ಣಗಳ ಹೊಂದಾಣಿಕೆ, ಸೂಕ್ತ ಸ್ಥಳಾವಕಾಶದ ಬಳಕೆ ಆಕರ್ಷಕವಾಗಿ ಮೂಡಿಬಂದಿದೆ.

**೨. ತಪೋನಿರತ ತುಳಜಾಭವಾನಿ :**

ಆರು ಕೈಗಳನ್ನು ಹೊಂದಿದ ತುಳಜಾಭವಾನಿಯು ಜಪಮಾಲೆಯೊಂದಿಗೆ ಧ್ಯಾನಮಾಡುತ್ತ ಕಮಲದ ಹೂವಿನ ಮೇಲೆ ಕುಳಿತಿರುವ ದೃಶ್ಯವು ೭"x೨೨" ಇಂಚುಗಳುಳ್ಳ ಅಡ್ಡವಾದ ಮಾಡಿನಲ್ಲಿ ರಚನೆಗೊಂಡಿದೆ. ಪ್ರತಿಯೊಂದು ಕೈಯಲ್ಲಿ ಒಂದೊಂದು ಆಯುಧವನ್ನು ಹಿಡಿದಿದ್ದು, ಜಪಮಾಲೆಯನ್ನು ಎಣಿಸುತ್ತ ಧ್ಯಾನಮಗ್ನಳಾಗಿ ಪದ್ಮಾಸನದಲ್ಲಿ ಕುಳಿತಿರುವಳು. ಇದು ನಿಪ್ಪಾಣಿ ಸಂಸ್ಥಾನದ ಕುಲದೇವತೆಯಾದ ತುಳಜಾಭವಾನಿಯ ಚಿತ್ರವಾಗಿದ್ದು, ಎಡಬಲಗಳಲ್ಲಿ ೮x೮" ಇಂಚುಗಳುಳ್ಳ ಚೌರಸ ಮಾಡುಗಳನ್ನು ಹೊಂದಿದ್ದು, ಅವುಗಳಲ್ಲಿ ಒಂದೊಂದು ಹೂವುಗಳನ್ನು ರಚಿಸಲಾಗಿದೆ. ಈ ಮಾಡುಗಳ ಸುತ್ತಲೂ ವಿವಿಧ ರೀತಿಯ ಅಲಂಕಾರಿಕ ಹೂವುಗಳನ್ನು ಚಿತ್ರಿಸಲಾಗಿದೆ.

ಈ ಕಲಾಕೃತಿಯಲ್ಲಿ ತುಳುಜಾಭವಾನಿ ದೇವಿಯ ಅರೆದೆರೆದ ಕಣ್ಣುಗಳು, ಉದ್ದನೆಯ ಮೂಗು, ಚಿಕ್ಕದಾದ ತುಟಿಗಳು ಭಕ್ತಿಯ ಭಾವನೆಯನ್ನು ಹೊರಹಾಕುವ ಪ್ರಯತ್ನ ಈ ಮುಖದಲ್ಲಿ ವ್ಯಕ್ತಪಡಿಸಿರುವುದನ್ನು ಕಾಣಬಹುದಾಗಿದೆ.

**೩. ರಾಸಲೀಲೆಯಲ್ಲಿ ತೊಡಗಿರುವ ಕೃಷ್ಣ:**

ಪ್ರಮುಖ ಮಾಡಿನ ಎಡಬದಿಯಯಲ್ಲಿ ೮x೧೬" ಇಂಚು ಅಳತೆಯಲ್ಲಿರುವ ಚಿಕ್ಕಮಾಡಿನಲ್ಲಿ ರಚನೆಗೊಂಡ ಈ ಚಿತ್ರವು ಕೃಷ್ಣನು ತನ್ನ ಸಖಿಯೊಂದಿಗೆ ರಾಸಲೀಲೆಯಲ್ಲಿ ತೊಡಗಿರುವ ದೃಶ್ಯವಾಗಿದ್ದು,

ಮನೆಯ ಒಳ ಆವರಣದಲ್ಲಿ ಒಂದು ಮಂಚದ ಮೇಲೆ ಕೃಷ್ಣನು ತನ್ನ ಬಲಗಾಲನ್ನು ಚಾಚಿದ್ದು ಎಡಗಾಲನ್ನು ಮಡಚಿಕೊಂಡಿದ್ದಾನೆ. ಸಖಿಯನ್ನು ತನ್ನ ತೊಡೆಯ ಮೇಲೆ ಕೂಡ್ರಿಸಿಕೊಂಡು ಎರಡೂ ಕೈಯಿಂದ ಆಕೆಯನ್ನು ಜೋರಾಗಿ ಅಪ್ಪಿಕೊಂಡು ತುಟಿಗೆ ಮುತ್ತು ಕೊಡುವ ದೃಶ್ಯ ಇದಾಗಿದ್ದು, ಕೃಷ್ಣನು ಕಿರೀಟಧಾರಿಯಾಗಿದ್ದು, ಹಳದಿವರ್ಣದ ಶಾಲನ್ನು ಹೊದ್ದುಕೊಂಡಿದ್ದಾನೆ ಹಾಗೂ ಹಳದಿ ವರ್ಣದ ಪಂಚೆಯನ್ನು ಉಟ್ಟಿದ್ದಾನೆ. ಆತನ ಸಖಿಯು ಕೆಂಪು ಜರತಾರೆಯ ಗೆರೆಗೆರೆಯಾಗಿರುವ ಸೀರೆಯನ್ನು ಉಟ್ಟಿದ್ದು, ಹಳದಿ ವರ್ಣದ ಕುಪ್ಪಸವನ್ನು ತೊಟ್ಟಿದ್ದಾಳೆ. ಇವರ ಮಂಚದ ಸಮೀಪದಲ್ಲಿಯೇ ಒಂದು ಪಾತ್ರೆಯಲ್ಲಿ ಹಣ್ಣುಹಂಪಲಗಳಿದ್ದು, ಹೂಜಿಯಲ್ಲಿ ನೀರು ಮತ್ತು ಪಾನಪೇಯಗ್ಲಾಸುಗಳಿವೆ. ಹಿನ್ನೆಲೆಗೆ ಕೆಂಪುವರ್ಣವನ್ನು ಬಳಸಿದ್ದು. ಮೇಲ್ಗಡೆಯಲ್ಲಿ ಆಕಾಶವು ಹಳದಿ ವರ್ಣ ಹೊಂದಿದ್ದು ಮೋಡಗಳನ್ನು ಸಹ ತೋರಿಸಲಾಗಿದೆ. ಚಿತ್ರದ ಹೊರರೇಖೆಗಳನ್ನು ಕಪ್ಪು ವರ್ಣದಿಂದ ಬರೆಯಲಾಗಿದೆ. ಒಟ್ಟಾರೆಯಾಗಿ ಈ ಚಿತ್ರವು ಉಜ್ವಲ ವರ್ಣಗಳು ಹಾಗೂ ಶಕ್ತಿಯುತವಾದ ರೇಖೆಗಳಿಂದಾಗಿ ಶೃಂಗಾರಮಯವಾಗಿ ಮೂಡಿಬಂದಿದೆ.

ಒಟ್ಟಾರೆಯಾಗಿ ಈ ಕಲಾಕೃತಿಯಲ್ಲಿ ಉಜ್ವಲವಾದ ವರ್ಣಗಳ ಬಳಕೆಯಾಗಿದ್ದು, ಪ್ರೀತಿ, ಪ್ರೇಮ, ಪ್ರಣಯದ ಸಂಕೇತವಾಗಿ ಬರುವ ಹಳದಿ, ಕೆಂಪು ವರ್ಣಗಳು ಆಕೃತಿಗಳಲ್ಲಿಯ ಚಲನೆ ಮುಖದಲ್ಲಿಯ ಶೃಂಗಾರದಭಾವನೆಗಳು ಹೊರಹೊಮ್ಮಿದ್ದು ಸಂಯೋಜನಾ ದೃಷ್ಟಿಯಿಂದಲೂ ಈ ಕಲಾಕೃತಿ ಉತ್ತಮವಾದುದಾಗಿದೆ.

**II. ಹೂದೋಟದಲ್ಲಿ ಗೋಪಿಕಾ ಸ್ತ್ರೀಯರೊಂದಿಗೆ ಶ್ರೀಕೃಷ್ಣ :**

ವಿವಿಧ ಭಂಗಿಗಳಲ್ಲಿರುವ ಹಲವಾರು ಸನ್ನಿವೇಶಗಳನ್ನೊಳಗೊಂಡ ಸುಮಾರು ೨೨ ಜನಗೋಪಿಕಾ ಸ್ತ್ರೀಯರೊಂದಿಗೆ ಕಾಣಿಸಿಕೊಳ್ಳುತ್ತಿರುವ ಶ್ರೀಕೃಷ್ಣನನ್ನು ನರ್ಮದಾ ನದಿಯ ದಡದಲ್ಲಿಯ ಹೂದೋಟದಲ್ಲಿ ಅದ್ಭುತವಾಗಿ ಚಿತ್ರಿಸಿರುವರು. ಈ ಇಡೀ ಸಂಯೋಜನೆಯಲ್ಲಿ ಕೃಷ್ಣನೊಬ್ಬನೇ ಪುರುಷನಾಗಿರುವನು. ಉಳಿದವರೆಲ್ಲಾ ಸ್ತ್ರೀಯರೇ ಆಗಿದ್ದು, ಕೃಷ್ಣನೊಂದಿಗೆ ಸಂಭಾಷಣೆಯಲ್ಲಿ ತೊಡಗಿರುವ ದೃಶ್ಯವಿದೆ. ಇದರಲ್ಲಿ ಸಂತೋಷ, ದುಃಖ, ವಿರಸ, ಸರಸ, ಸಂಭ್ರಮ, ಸಡಗರಗಳೆಲ್ಲ ನವರಸಗಳೊಂದಿಗೆ ಮೈದಳೆದಿರುವ ಈ ಸಂಯೋಜನೆಯು ದೊಡ್ಡ ಮಾಡಿನಲ್ಲಿ ೩೪"x೨೨" ಇಂಚುಗಳ ಅಳತೆಯಲ್ಲಿ ಕಲಾತ್ಮಕವಾಗಿ ಮೂಡಿಬಂದಿದೆ. ಗೋಪಿಕಾಸ್ತ್ರೀಯರು ಅನೇಕ ವಿಧದಲ್ಲಿಯ ವರ್ಣದ ರವಿಕೆ ಮತ್ತು ಸೀರೆ ಹಾಗೂ ಲಂಗಾಗಳೊಂದಿಗೆ ಕಂಗೊಳಿಸುತ್ತಿದ್ದು, ಶ್ರೀಕೃಷ್ಣನಿಗೆ ಸಾಮಾನ್ಯವಾಗಿ ಎಲ್ಲಕಡೆಗಳಲ್ಲಿ ಕಿರೀಟವೊಂದೇ ಇದ್ದು, ಭುಜದ ಮೇಲಿನ ಬಟ್ಟೆ ಹಾಗೂ ದೋತ್ರಗಳು ಕೆಂಪು, ಹಳದಿ, ಬಿಳಿ ವರ್ಣಗಳಲ್ಲಿ ಮೂಡಿ ಬಂದಿವೆ. ಮೈ ಬಣ್ಣ ಮಾತ್ರ

ನೀಲಿವರ್ಣದಲ್ಲಿಯೇ ಚಿತ್ರಿತಗೊಂಡಿದೆ. ವಿಶೇಷವಾಗಿ ಕೆಂಪುಬಣ್ಣವನ್ನು ಬಳಸಿದ್ದು ನೆಲವು ಸಮತಟ್ಟಾಗಿದ್ದು, ಹಸಿರು ಹುಲ್ಲಿನಿಂದ ತುಂಬಿದೆ. ಚಿತ್ರದಲ್ಲಿ ರೇಖೆಗಳು ಶಕ್ತಿಯುತವಾಗಿ ಜೀವಂತವಾಗಿದ್ದು, ಚಿತ್ರದ ಭಾವನೆ ಮತ್ತು ಸಮೀಪದೂರ ತೋರಿಸುವಲ್ಲಿಯೂ ಈ ಚಿತ್ರ ಪರಿಣಾಮಕಾರಿಯಾಗಿ ಮೂಡಿಬಂದಿದೆ. ಚಿತ್ರದಲ್ಲಿಯ ವಿವಿಧ ಆಕೃತಿಗಳನ್ನು ಕಲಾತ್ಮಕತೆಗೊಳಿಸಿದ ಬಗ್ಗೆ ಅಂದರೆ ಸಂಯೋಜನಾ ವಿನ್ಯಾಸ ವರ್ಣಗಳ ಹೊಂದಾಣಿಕೆ, ಸೂಕ್ತಸ್ಥಳಾವಕಾಶದ ಬಳಕೆಯನ್ನು ಜಾಣತನದಿಂದಲೇ ಬಳಸಿಕೊಂಡಿರುವುದು ಕಂಡುಬರುತ್ತದೆ.

**II. ಅ. ರಾಜಕುಮಾರಿಯರ ಚಿತ್ರಗಳು:**

ಈ ಕಲಾಕೃತಿಗಳು ದಖ್ಖನ್ ಮತ್ತು ರಾಜಸ್ಥಾನಿ ಕಲೆಯ ಪ್ರಭಾವದಿಂದಾಗಿ ಉತ್ಕೃಷ್ಟತೆಯನ್ನು ಸಾರುತ್ತವೆ. ತಾಂತ್ರಿಕ ದೃಷ್ಟಿಯಿಂದಲೂ ನೈಪುಣ್ಯತೆಯ ದೃಷ್ಟಿಯಿಂದಲೂ ಈ ಕಿರುರೂಪದ ಭಿತ್ತಿ ಚಿತ್ರಗಳು ಅತ್ಯಂತ ಪ್ರಭಾವಶಾಲಿಯಾಗಿ ಬೆಳೆದು ಬಂದಿವೆ. ಪ್ರಮುಖ ಮಾಡಿನಲ್ಲಿ ಹೂದೋಟದಲ್ಲಿ ಗೋಪಿಕಾ ಸ್ತ್ರೀಯರೊಂದಿಗೆ ಶ್ರೀಕೃಷ್ಣನಿರುವ ಚಿತ್ರದ ಎಡಬದಿಯಲ್ಲಿ ೮x೮" ಇಂಚು ಅಳತೆಯಲ್ಲಿ ಸುಮಾರು ೭ ಜನ ರಾಜಕುಮಾರಿಯರ ಚಿತ್ರಗಳು ಒಂದರ ಮೇಲೊಂದರಂತೆ ರಚನೆಗೊಂಡಿವೆ.

**೧. ಸಾಳ್ವ ಪಕ್ಷಿಯೊಂದಿಗಿರುವ ರಾಜಕುಮಾರಿ:**

ತನ್ನ ಎಡಗೈಯಲ್ಲಿ ಸಾಳ್ವ ಪಕ್ಷಿಯೊಂದನ್ನು ಹಿಡಿದುಕೊಂಡು ಅದರ ಜೊತೆ ಮಾತನಾಡುತ್ತ ಆಟ ಆಡುತ್ತಿರುವ ರಾಜಕುಮಾರಿಯು ದಖ್ಖನ್‌ಶೈಲಿಯ ಪಾರದರ್ಶಕ ಬಟ್ಟೆಗಳು, ರಜಪೂತ ಶೈಲಿಯ ಶಕ್ತಿಯುತ ರೇಖೆಗಳು ಹಾಗೂ ದಖ್ಖನ್‌ದಂತೆ ಭಾವನೆಗಳಿಗೆ ಒತ್ತುಕೊಟ್ಟು ರಚಿಸಿದ್ದು ಈ ಚಿತ್ರದಲ್ಲಿ ಸೂಕ್ಷ್ಮತೆಯೊಂದಿಗೆ ಅಲಂಕಾರಿಕ ಶೈಲಿಯೂ ಸೇರಿಕೊಂಡಿದ್ದು, ರಾಜಕುಮಾರಿಯ ಸೌಂದರ್ಯವನ್ನು ವೃದ್ಧಿಸಿದೆ. ಒಳಗಡೆಯ ಚೂಡಿದಾರವು ಅಪಾರದರ್ಶಕವಾಗಿದ್ದು, ಕೆಳಗಡೆಯ ಹಸಿರು ಪೈಜಾಮು ಕೆಂಪುಬಣ್ಣದ ರವಿಕೆ ಹಾಗೂ ಮೇಲುಡುಗೆಯು ಪಾರದರ್ಶಕವಾಗಿದ್ದು, ಅಂಚು ಮತ್ತು ದಡಿಗಳಿಗೆ ಬಂಗಾರದ ವರ್ಣವನ್ನು ತುಂಬಿದ್ದು, ಹಿಂದೂ ಮಹಿಳೆಯರಿಗೆ ಇರುವ ಬಳೆ, ಕುಂಕುಮ, ಮೂಗುತಿ, ಕೊರಳಲ್ಲಿ ಆಭರಣಗಳು ಚೆಲುವೆಯ ಅಂದವನ್ನು ಹೆಚ್ಚಿಸಿವೆ.

ಈ ಕಲಾಕೃತಿಯಲ್ಲಿ ಬರುವ ಸಾಳ್ವಪಕ್ಷಿಯು ರಾಜಕುಮಾರಿಯೊಂದಿಗೆ ಮಾತಾಡುತ್ತಿರುವ ದೃಶ್ಯವು ನೈಜವಾಗಿ ಮೂಡಿಬಂದಿದ್ದು, ವ್ಯಕ್ತಿ ಹಾಗೂ ಪಕ್ಷಿಗಳ ಮುಖಭಾವನೆಗಳನ್ನು ಸಮರ್ಥವಾಗಿ ಹೊರಹೊಮ್ಮಿದ್ದು ವರ್ಣಗಳ ಹೊಂದಾಣಿಕೆ ಸಂಯೋಜನಾ ಕೌಶಲ್ಯ ಉತ್ತಮವಾಗಿ ರೂಪುಗೊಂಡಿದೆ.

**೨. ಜಿಂಕೆಗೆ ತಪ್ಪಲು ತಿನ್ನಿಸುತ್ತಿರುವ ರಾಜಕುಮಾರಿ:**

ಗಿಡದ ಬಳ್ಳಿಯೊಂದನ್ನು ತನ್ನ ಎಡಗೈಯಿಂದ ಮೇಲಕ್ಕೆತ್ತಿ ಹಿಡಿದು ಜಿಂಕೆಗೆ ತಿನಿಸುತ್ತಿರುವ ರಾಜಕುಮಾರಿಯು ತನ್ನ ತಲೆಯ ಎತ್ತರಕ್ಕೆ ಅದನ್ನು ಮೇಲಕ್ಕೆತ್ತಿದ್ದಾಳೆ. ಜಿಂಕೆಯು ಅದನ್ನು ತಿನ್ನಲು

ಬಾಯಿಯನ್ನು ಮೇಲೆ ಮಾಡಿದ್ದು, ತನ್ನ ಹಿಂಗಾಲುಗಳ ಮೇಲೆ ನಿಂತು ಮುಂಗಾಲುಗಳನ್ನು ಮಡಚಿಕೊಂಡು ಮೇಲಕ್ಕೆ ಜಗಿಯುತ್ತಿರುವ ದೃಶ್ಯವಿದೆ. ರಾಜಕುಮಾರಿಯು ಮಂದಹಾಸದ ನಗೆಯನ್ನು ಬೀರುತ್ತಿದ್ದರೆ ಜಿಂಕೆಯು ಆಹಾರಕ್ಕಾಗಿ ಹಾತೊರೆಯುತ್ತದೆ. ರಾಜಕುಮಾರಿಯ ಉಡುಗೆಗಳು ದಖ್ಖನ್ ಮತ್ತು ರಜಪೂತ ಶೈಲಿಗಳಂತೆ ಪಾರದರ್ಶಕವಾಗಿದ್ದು, ಅಲಂಕಾರಿಕ ನಕ್ಷೆಗಳನ್ನು ಚುಕ್ಕೆಯ ರೂಪದಲ್ಲಿ ಚಿತ್ರಿಸಲಾಗಿದೆ. ರಾಜಕುಮಾರಿಯ ಮೇಲುಡುಗೆಯಲ್ಲಿಯ ನಕ್ಷೆಗಳಿಗೆ ಮತ್ತು ದಡಿಯ ಅಂಚುಗಳಿಗೆ ಬಂಗಾರದ ವರ್ಣವನ್ನು ಹಾಗೂ ಜಿಂಕೆಗೆ ಕಂದುಗೆಂಪು ವರ್ಣವನ್ನು ಬಳಸಲಾಗಿದ್ದು, ಚಿತ್ರದ ಹಿನ್ನೆಲೆಗೆ ಕೆಂಪುವರ್ಣವನ್ನು ಬಳಸಲಾಗಿದೆ. ರಾಜಕುಮಾರಿಯು ಬಳೆ, ಮೂಗುತಿ, ಕಿವಿಯೋಲೆಗಳನ್ನು ಹಾಕಿಕೊಂಡಿದ್ದು, ಹಿಂದೂ ಮಹಿಳೆಯಾಗಿರುವಳು ಎಂಬುದು ತಿಳಿದುಬರುತ್ತದೆ. ಹಾಗೂ ರಜಪೂತ ಕಲೆಯ ದಟ್ಟಪ್ರಭಾವ ಹೊಂದಿರುವುದು ಕಂಡುಬರುತ್ತದೆ.

**೩. ಇನಿಯನ ನಿರೀಕ್ಷೆಯಲ್ಲಿರುವ ರಾಧೆ:**

ತೆಳ ಹಾಸುವಿನ ಮೇಲೆ ನಿಂತು ತನ್ನ ಇನಿಯ ಕೃಷ್ಣನ ಬರುವಿಕೆಯನ್ನು ತದೇಕ ಚಿತ್ತದಿಂದ ನೋಡುತ್ತಿರುವ ರಾಧೆಯ ಚಿತ್ರವಾಗಿದ್ದು, ತಿಳಿಹಸಿರು ವರ್ಣದ ಪೈಜಾಮು, ಕಪ್ಪುಮಿಶ್ರಿತ ಹಸಿರುವರ್ಣದ ರವಿಕೆ, ಕಂದಕೆಂಪುಬಣ್ಣದ ಮೇಲು ಹೊದಿಕೆ (ದುಪ್ಪಟ್ಟಾ) ಹಾಗೂ ಮೇಲುಡುಗೆಯು ಪಾರದರ್ಶಕವಾಗಿದ್ದು, ಬಟ್ಟೆಯ ಅಂಚು ಮತ್ತು ದಡಿಯಲ್ಲಿ ಬಂಗಾರದ ವರ್ಣಗಳಿಂದ ತುಂಬಿದ್ದ ಬಳೆಗಳು, ಮೂಗುತಿ, ಕಿವಿಯೋಲೆ ಹಾಗೂ ಅಭರಣದ ವರ್ಣಗಳಿಂದ ತುಂಬಿದ್ದು ಬಳೆಗಳು, ಮೂಗುತಿ, ಕಿವಿಯೋಲೆ ಹಾಗೂ ಆಭರಣಗಳನ್ನು ಧರಿಸಿರುವ ರಾಧೆ ರಜಪೂತ ಶೈಲಿಯ ಲಕ್ಷಣಗಳನ್ನು ಹೊಂದಿದ್ದು ಸುಂದರವಾಗಿ ಮೂಡಿಬಂದಿದೆ.

ಅರೆದೆರೆದ ಕಣ್ಣುಗಳೊಂದಿಗೆ ನಯನಾಜೂಕನ್ನು ಹೊಂದಿದ ರಾಧೆ. ತನ್ನ ಇನಿಯನ ನಿರೀಕ್ಷೆಯಲ್ಲಿರುವ ರಾಧೆಯ ಮುಖದಲ್ಲಿ ಭಾವನೆಗಳನ್ನು ವ್ಯಕ್ತಪಡಿಸಿದ್ದು, ಹಾಗೂ ಅಕಾರ, ಗಾತ್ರ, ಪ್ರಮಾಣಗಳನ್ನು ಸೂಕ್ತವಾಗಿ ಬಳಸಿಕೊಳ್ಳಲಾಗಿದೆ.

**೪. ಇನಿಯನಿಗೆ ಸಂದೇಶ ಕಳಿಸುತ್ತಿರುವ ರಾಧೆ:**

ಬಲಗೈಯಲ್ಲಿ ಪಾರಿವಾಳವೊಂದನ್ನು ಹಿಡಿದುಕೊಂಡು ತನ್ನ ಇನಿಯನಾದ ಶ್ರೀ ಕೃಷ್ಣನಿಗೆ ಸಂದೇಶವನ್ನು ಕಳಿಸುತ್ತಿರುವ ಸನ್ನಿವೇಶ ಇದಾಗಿದ್ದು, ರಾಧೆಯು ಕಪ್ಪುವರ್ಣದ ಪೈಜಾಮು, ತಿಳಿಗೆಂಪುವರ್ಣದ ರವಿಕೆ, ಕಡುಗೆಂಪು ವರ್ಣದ (ತಲೆಯಿಂದ ಕೆಳಗೆ ಇಳಿಬಿದ್ದಿರುವ) ದುಪ್ಪಟ್ಟಾ ಪಾರದರ್ಶಕವಾದ ಮೇಲುಡುಗೆಯಲ್ಲಿ ನಕ್ಷೆಗಳು, ದಡಿ ಅಂಚುಗಳಲ್ಲಿ ಬಂಗಾರದ ವರ್ಣ ತುಂಬಿದ್ದು ಬೂದುವರ್ಣದ ಪಾರಿವಾಳವಿದ್ದು ಹಿನ್ನೆಲೆಗೆ ಕೆಂಪು ವರ್ಣವನ್ನು ತುಂಬಿದ್ದು ದಖ್ಖನ್ ಹಾಗೂ ರಜಪೂತ ಕಲೆಗಳ ಸಂಗಮವಾಗಿ ರೂಪುಗೊಂಡಿದೆ.

ಈ ಕೃತಿಯಲ್ಲಿ ರಾಧೆ ಹಾಗೂ ಪಕ್ಷಿಗಳೆರಡರ ಮುಖಗಳಲ್ಲಿಯೂ ಭಾವನೆಗಳು ತುಂಬಿಕೊಂಡಿದ್ದು ಪ್ರಜ್ವಲವಾದ ವರ್ಣಗಳನ್ನು ಬಳಸಿದ್ದು, ವರ್ಣಗಳ ಹೊಂದಾಣಿಕೆಯೂ ಉತ್ತಮವಾಗಿ ಮೂಡಿಬಂದಿದೆ. ಪಾರದರ್ಶಕ ಬಟ್ಟೆಗಳು ಅದರಲ್ಲಿ ನಕ್ಷೆಗಳು ಈ ಎಲ್ಲ ತಂತ್ರಗಳೂ ಬಂಗಾರದ ವರ್ಣದೊಂದಿಗೆ ಕಂಗೊಳಿಸುತ್ತವೆ.

**೫. ಯೋಚನಾ ಮಗ್ನಳಾದ ರಾಧೆ :**

ರಾಧೆಯು ತನ್ನ ಇನಿಯನ ಬರುವಿಕೆಯ ವಿಳಂಬದ ಕುರಿತು ಯೋಚನಾಮಗ್ನಳಾಗಿದ್ದು, ಹತ್ತಿರದಲ್ಲಿರುವ ಜಿಂಕೆಯು ಆಕೆಯನ್ನು ಪ್ರಶ್ನಿಸುವಂತೆ ಹೊರಳಿಕೊಂಡು ರಾಧೆಯ ಮುಖವನ್ನು ನೋಡುತ್ತಿರುವ ದೃಶ್ಯ ಸುಂದರವಾಗಿ ಮೂಡಿಬಂದಿದೆ. ರಾಧೆಯ ಮುಖದಲ್ಲಿ ಚಿಂತಿಸುತ್ತಿರುವ ಭಾವನೆ ಕಂಡುಬಂದರೆ, ರಾಧೆಯನ್ನು ಹೊರಳಿ ನೋಡುತ್ತಿರುವ ಜಿಂಕೆಯ ಚಲನೆ, ಭಾವನೆಗಳು ಅದ್ಭುತವಾಗಿ ಮೂಡಿಬಂದಿದೆ. ಕಡುಗೆಂಪುವರ್ಣದ ಲಂಗಾ ಅದರಲ್ಲಿ ಕಾಣುವ (ಪೋಲ್ಡಿಂಗ್) ಮಡಿಕೆಗಳು ವಿಶೇಷವಾಗಿ ಕಾಣಿಸುತ್ತಿದ್ದು, ಹಸಿರು ವರ್ಣದ ರವಿಕೆ ಮೇಲುಡುಗೆಯು ಪಾರದರ್ಶಕವಾಗಿದ್ದು, ರಾಧೆಯ ಸೌಂದರ್ಯವು ವೃದ್ಧಿಸುತ್ತಿದೆ. ಈ ಕೃತಿಯಲ್ಲೂ ಅಭರಣಗಳು ಮತ್ತು ಬಟ್ಟೆಯ ಅಂಚು, ದಡಿಗಳಲ್ಲಿ ಬಂಗಾರದ ವರ್ಣವನ್ನು ತುಂಬಿರುವುದು ಕಂಡುಬರುತ್ತಿದ್ದು, ಹಿನ್ನೆಲೆಯು ಕೆಂಪುವರ್ಣದಲ್ಲಿದೆ.

**೬. ನೃತ್ಯಭಂಗಿಯಲ್ಲಿರುವ ರಾಧೆ:**

ರಾಧೆಯು ನೃತ್ಯದ ಭಂಗಿಯಲ್ಲಿದ್ದು ತನ್ನ ಎರಡೂ ಕೈಗಳನ್ನು ಮೇಲಕ್ಕೆತ್ತಿ, ತಲೆಯ ಮೇಲ್ಗಡೆಯಲ್ಲಿ ಅರ್ಧ ವೃತ್ತಾಕಾರವಾಗಿ ಕೂಡಿಸಿಕೊಂಡು ಬಲಗೈ ಮೇಲ್ಗಡೆಯಾಗಿ ಬಾಗಿಸಿದ್ದು ಬಲಗಾಲು ಮಡಚಿಕೊಂಡು ಕೋನಾಕಾರದಲ್ಲಿದ್ದು, ಎಡಗಡೆ ಕೈಕೆಳಗಡೆಯಿಂದ ಮೇಲಕ್ಕೆ ಹೋಗಿದ್ದು, ಎಡಗಾಲು ನೇರವಾಗಿ ಊರಲಾಗಿದೆ. ಈ ನೃತ್ಯದ ಭಂಗಿಯಲ್ಲಿರುವ ರಾಧೆ ಕಡುನೀಲಿ ವರ್ಣದ ಪೈಜಾಮು, ಕಡುಗೆಂಪು ವರ್ಣದ ರವಿಕೆ, ಹಳದಿವರ್ಣದ ಪಾರದರ್ಶಕವಾದ ಮೇಲುಡುಗೆಯನ್ನು ಹೊಂದಿದ್ದು, ಗೆರೆಗಳಿಂದ ಅಲಂಕರಣಗೊಳಿಸಲಾಗಿದೆ. ಈ ರಾಧೆಯ ಮೈಮೇಲೆ ಸ್ವಲ್ಪ ಹೆಚ್ಚಿಗೆ ಆಭರಣಗಳನ್ನು ಧರಿಸಿದ್ದು, ಮುಖವು ಮಂದಹಾಸದ ನಗುವಿನೊಂದಿಗೆ ಕೂಡಿದೆ. ಹಿನ್ನೆಲೆ ವರ್ಣವು ಕೆಂಪುಬಣ್ಣದ್ದಾಗಿದೆ. ಈ ಕೃತಿಯೂ ದಖ್ಖನ್ ಹಾಗೂ ರಜಪೂತ ಕಲಾಶೈಲಿಯನ್ನು ಹೊಂದಿದ್ದು, ಸುಂದರವಾಗಿ ಮೂಡಿಬಂದಿದೆ.

ವಿಶೇಷ ಭಂಗಿಯಲ್ಲಿರುವ ಈ ಕೃತಿಯು ಪ್ರಮಾಣಬದ್ಧವಾಗಿದ್ದು, ನೃತ್ಯದ ಆಂಗಿಕ ಅಂಶಗಳನ್ನು ಒಳಗೊಂಡಿದ್ದು, ಆಕಾರ ಮತ್ತು ಗಾತ್ರಗಳನ್ನು ಕಾಯ್ದುಕೊಂಡಿದೆ.

**೭. ಎದುರು ನೋಡುತ್ತಿರುವ ರಾಧೆ:**

ಲ''xಲಿ'' ಅಳತೆಯಲ್ಲಿರುವ ಕೃತಿ ನೀಲಿ ವರ್ಣದ ತೆಳುಹಾಸಿನಲ್ಲಿ ನಿಂತಿರುವ ರಾಧೆಯು ಕೃಷ್ಣನ ಬರುವಿಕೆಯನ್ನು ಆಶೆ ಕಣ್ಣುಗಳಿಂದ ಎದುರು ನೋಡುತ್ತಿರುವ ದೃಶ್ಯ ಇದಾಗಿದ್ದು, ಹಸಿರುವರ್ಣದ ಪೈಜಾಮು ಕೆಂಪುವರ್ಣದ ರವಿಕೆ ತೆಳು ಗುಲಾಬಿ ಮಿಶ್ರಿತ ಬಿಳಿಯ ವರ್ಣದಲ್ಲಿ ಪಾರದರ್ಶಕವಾದ ಮೇಲುಡುಗೆಯನ್ನು ಧರಿಸಿಕೊಂಡಿದ್ದು, ಬಟ್ಟೆಯ ಅಂಚುಗಳು ಮತ್ತು ದಡಿಯು ಬಂಗಾರದ ವರ್ಣದಲ್ಲಿ ಕಂಗೊಳಿಸುತ್ತಿದ್ದು ಆಕರ್ಷಕವಾಗಿ ಮೂಡಿಬಂದಿದೆ. ಇದೂ ಕೂಡಾ ರಜಪೂತ ಕಲೆಯ ದಟ್ಟಪ್ರಭಾವದಿಂದಾಗಿ ರಚನೆಗೊಂಡಿದೆ.

ಸಾಮಾನ್ಯವಾಗಿ ಈ ಏಳುಜನ ರಾಜಕುಮಾರಿಯರ ಚಿತ್ರಗಳಲ್ಲಿ ರಜಪೂತ ಕಲೆಯ ರಾಗಮಾಲಾ ಚಿತ್ರಗಳ ಪ್ರಭಾವ ವಿರುವುದು ಕಂಡುಬರುತ್ತದೆ. ರೇಖೆಗಳಲ್ಲಿಯ ಸತ್ವ, ವರ್ಣಗಳ ಹೊಂದಾಣಿಕೆ, ಪಾರದರ್ಶಕವಾದ ಉಡುಪು, ಶೈಲಿ, ತಂತ್ರ, ವಿನ್ಯಾಸಗಳೆಲ್ಲ ರಜಪೂತ ಕಲೆಯನ್ನು ಹೋಲುತ್ತಿದ್ದು, ಬಹುಶಃ ರಜಪೂತ ನುರಿತ ಕಲಾವಿದರಿಂದಲೇ ಈ ಕಲಾಕೃತಿಗಳನ್ನು ರಚಿಸಿರಬಹುದೆಂದು ಊಹಿಸಬಹುದಾಗಿದೆ.

**II. ಬ. ಸ್ಥಳೀಯ ಪ್ರಭಾವದ ಚಿತ್ರಗಳು:**

ಸ್ಥಳೀಯ ಉಡುಗೆ ತೊಡುಗೆಗಳು, ಬಳಸುವ ವಸ್ತುಗಳು, ರೇಖೆ, ವರ್ಣಗಳ ಬಳಕೆ, ಹೊಂದಾಣಿಕೆ, ವಿನ್ಯಾಸ, ಆಕಾರ, ಗಾತ್ರ, ಪ್ರಮಾಣಗಳು ವಿಷಯಗಳಿಗನುಗುಣವಾಗಿ ರಚನೆಗೊಂಡ ಚಿತ್ರಗಳನ್ನು ಪರಿಶೀಲಿಸಿದಾಗ (ಗ್ರಾಮೀಣ) ಜನಪದ ಚಿತ್ರಗಳ ಪ್ರಭಾವದೊಂದಿಗೆ ರಜಪೂತ ಮತ್ತು ದಖ್ಖನ್ ಕಲೆಗಳ ಪ್ರಭಾವವು ಈ ಚಿತ್ರಗಳಲ್ಲಿ ಕಂಡುಬರುತ್ತವೆ.

**೧. ಬಿಂಗರಿ ಆಡಿಸುತ್ತಿರುವ ರಾಧೆ:**

ನೃತ್ಯ ಭಂಗಿಯಲ್ಲಿರುವ ರಾಧೆ ಬಿಂಗರಿಯನ್ನು ಆಡಿಸುತ್ತಲಿರುವ ದೃಶ್ಯ ಇದಾಗಿದ್ದು, ಎಡಗಾಲ ಮೇಲೆ ನಿಂತಿದ್ದು, ಬಲಗಾಲನ್ನು ಕೋನಾಕರದಲ್ಲಿಟ್ಟಿದ್ದು ಬಲಗೈ ಮೇಲ್ಗಡೆ ಮಾಡಿದ್ದು ನಡು ಬೆರಳಿಗೆ ಬಿಂಗರಿಯ ದಾರವನ್ನು ಕಟ್ಟಿಕೊಂಡಿರುವಳು. ಕೆಳಗಡೆಯ ಕೈಯಲ್ಲಿ ಆ ದಾರವನ್ನು ಹಿಡಿದುಕೊಂಡಿದ್ದು, ಕೆಳಗಡೆ ದಾರದಿಂದ ಹೊರಬರುತ್ತಿರುವ ಹೂವಿನಾಕಾರದ ಬಿಂಗರಿಯು ತಿರುಗುತ್ತಿರುವ ದೃಶ್ಯವಿದೆ. ರಾಧೆಯು ಕೆಂಪುವರ್ಣದ ಸೀರೆಯನ್ನು ಉಟ್ಟಿದ್ದು, ಗೆರೆಗೆರೆಯಾಗಿರುವ ನಕ್ಷೆಯನ್ನು ಹೊಂದಿದ್ದು ಬಂಗಾರವರ್ಣವನ್ನು ಅಂಚು ಮತ್ತು ದಡಿಗಳಿಗೆ ಬಳಸಲಾಗಿದೆ. ಹಳದಿ ವರ್ಣದ ರವಿಕೆಯನ್ನು ಉಟ್ಟುಕೊಂಡಿರುವಳು. ಬಳೆ, ಅಭರಣಗಳನ್ನು, ಬಂಗಾರದ ವರ್ಣದಿಂದ ಚಿತ್ರಿಸಲಾಗಿದೆ. ಮಂಟಪದ

ಮೇಲೆ ನಿಂತಿರುವ ರಾಧೆಯ ಹಿನ್ನೆಲೆಯಲ್ಲಿ ಕೆಂಪುವರ್ಣವನ್ನು ತುಂಬಲಾಗಿದೆ. ಈ ಕಲಾಕೃತಿಯು ದಖ್ಖನ್ ಹಾಗೂ ರಜಪೂತ ಕಲೆಗಳ ಪ್ರಭಾವದಿಂದಾಗಿ ರಚಿಸಲ್ಪಟ್ಟಿದೆ. ಈ ಕೃತಿಯನ್ನು ೪''x೫'' ಇಂಚು ಅಳತೆಯಲ್ಲಿ ರಚಿಸಲಾಗಿದೆ.

ಈ ಕಲಾಕೃತಿಯು ಸ್ಥಗಿತಗೊಳ್ಳದೆ ಚಲಿಸುತ್ತಿರುವ ಭ್ರಮೆ ಮೂಡಿಸುವಂತೆ ಸಂಯೋಜನೆಯ ವಿವಿಧ ಘಟನೆಗಳನ್ನು ವೃತ್ತದಿಂದ ವೃತ್ತಕ್ಕೆ ಹರಿಯುವಂತೆ ಮಾಡಿರುವುದು ಕುತೂಹಲಕಾರಿಯಾಗಿದೆ. ಇದರಿಂದ ಚಿತ್ರಕ್ಕೆ ಚಲನೆ ಬರುತ್ತದೆ.

**೨. ಆರತಿಯೊಂದಿಗೆ ಬರುತ್ತಿರುವ ರುಕ್ಮಿಣಿ:**

ಈ ಕಲಾಕೃತಿಯಲ್ಲಿ ಆರತಿಯ ತಟ್ಟೆಯನ್ನು ಹಿಡಿದುಕೊಂಡು ಬರುತ್ತಿರುವ ರುಕ್ಮಿಣಿಯ ಚಿತ್ರವನ್ನು ರಚಿಸಿದ್ದು, ತಟ್ಟೆಯಲ್ಲಿ ಕಳಸ ತಂಬಿಗೆ ಮತ್ತು ಆರತಿಯ ಸಮೂಹವಿರುವುದು ಅದನ್ನು ತನ್ನೆರಡೂ ಕೈಯಲ್ಲಿ ಹಿಡಿದುಕೊಂಡು ಬರುತ್ತಿರುವ ರಾಧೆಯ ಸೀರೆಯು ಕಂದುಗೆಂಪು ವರ್ಣದಲ್ಲಿದ್ದು, ಚುಕ್ಕೆಯಾಕಾರದ ನಕ್ಷೆಯನ್ನು ಹೊಂದಿರುವುದು. ಬಂಗಾರದ ವರ್ಣದಲ್ಲಿ ಸೀರೆಯ ಅಂಚು, ದಡಿಗಳಲ್ಲದೇ, ಅಭರಣಗಳು, ಕಳಸದ ಸಾಮಗ್ರಿಗಳು ಹಾಗೂ ತಟ್ಟೆಯನ್ನು ನಿರ್ಮಿಸಲಾಗಿದೆ. ಕಪ್ಪುಬಣ್ಣದ ರವಿಕೆಯನ್ನುಟ್ಟಿದ್ದು, ಬಂಗಾರ ವರ್ಣದ ಅಂಚುಗಳನ್ನು ಮಾಡಲಾಗಿದೆ. ಚಲಿಸುತ್ತಿರುವ ಈ ರುಕ್ಮಿಣಿಯ ಕೆಳಗಡೆ ವೇದಿಕೆಯೊಂದಿದೆ. ಹಿನ್ನೆಲೆಯಲ್ಲಿ ಕೆಂಪುವರ್ಣವನ್ನು ಲೇಪಿಸಲಾಗಿದೆ. ಈ ಕಲಾಕೃತಿಯನ್ನು ೪''x೫'' ಇಂಚುಗಳ ಅಳತೆಯಲ್ಲಿ ರಚಿಸಲಾಗಿದೆ. ಕಪ್ಪುವರ್ಣದ ರೇಖೆಗಳನ್ನು ಎಳೆಯಲಾಗಿದೆ.

**೩.ಯಶೋಧರೆಯೊಂದಿಗೆ ಬಾಲಕ ಕೃಷ್ಣ:**

ಕೆಂಪುವರ್ಣದ ಸೀರೆಯನ್ನುಟ್ಟುಕೊಂಡಿದ್ದು, ಚುಕ್ಕಿಯಾಕಾರದ ನಕ್ಷೆಗಳನ್ನು ಮಾಡಿದ್ದು, ಸೀರೆಯ ಅಂಚು ಮತ್ತು ದಡಿಗಳಿಗೆ ಬಂಗಾರದ ವರ್ಣವನ್ನು ಬಳಸಿರುವರು. ಕಪ್ಪು ರವಿಕೆಯನ್ನು ತೊಟ್ಟಿರುವ ಯಶೋಧರೆ ತಲೆಯ ಮೇಲೊಂದು ಹಳದಿ ವರ್ಣದ ಬುಟ್ಟಿಯನ್ನಿಟ್ಟುಕೊಂಡಿದ್ದು, ಅದರಲ್ಲಿ ವಸ್ತುಗಳನ್ನು ತುಂಬಿಕೊಂಡಿರುವಳು. ಎಡಗಡೆಯ ಕೈಯಿಂದ ಬುಟ್ಟಿಯನ್ನು ಹಿಡಿದುಕೊಂಡಿದ್ದು, ಬಲಗೈಯಿಂದ ಕೃಷ್ಣನಿಗೆ ಏನನ್ನೋ ಕೊಡುತ್ತಿರುವಂತೆ ಕಂಡುಬರುತ್ತಿದ್ದು, ಕೃಷ್ಣನು ತಾಯಿಯತ್ತ ಓಡಿಬರುತ್ತಿದ್ದು, ಎರಡೂ ಕೈಗಳನ್ನು ಮುಂದೆ ಚಾಚಿದ್ದು, ಬಲಗಾಲನ್ನು ಮೇಲಕ್ಕೆತ್ತಿದ್ದು, ಎಡಗಾಲನ್ನು ನೆಲಕ್ಕೆಊರಿದ್ದು, ಓಡಿಬರುತ್ತಿರುವ ದೃಶ್ಯವಿದೆ. ಹಿನ್ನೆಲೆಯಲ್ಲಿ ಕೆಂಪುವರ್ಣದ ಲೇಪನವನ್ನು ಮಾಡಲಾಗಿದೆ. ಈ ಕಲಾಕೃತಿಯ ವರ್ಣವು ಈಗ ಮಸುಕಾಗುತ್ತ ಹೊರಟಿದ್ದು, ಈ ಕೃತಿಯು ಅಲ್ಲಲ್ಲಿ ಹಾಳಾಗಿದ್ದುದು ಕಂಡುಬರುತ್ತದೆ. ಈ ಕಲಾಕೃತಿಯನ್ನು ೪''x೫'' ಇಂಚುಗಳ ಅಳತೆಯಲ್ಲಿ ರಚಿಸಲಾಗಿದೆ.

**೪. ಗೌಳಗಿತ್ತಿಯ ಕಲಾಕೃತಿ:**

ಗೌಳಗಿತ್ತಿ ಅಂದರೆ ಹಾಲು, ಮೊಸರುಗಳನ್ನು ತೆಗೆದುಕೊಂಡು ಹೋಗಿ ಮಾರುವವಳು. ಗೌಳಗಿತ್ತಿಯು ತಿಳಿಹಸಿರು ವರ್ಣದ ಚುಕ್ಕೆಗಳುಳ್ಳ ನಕ್ಷೆಗಳಿಂದ ಅಲಂಕರಿಸಿದ ಸೀರೆಯನ್ನು ಉಟ್ಟಿದ್ದಾಳೆ. ಬಂಗಾರದ ವರ್ಣದಿಂದ ಸೀರೆಯ ಅಂಚು ಮತ್ತು ದಡಿಗಳನ್ನು ಮಾಡಿದ್ದು ಕಂದುಗೆಂಪುವರ್ಣದ ರವಿಕೆಯನ್ನು ತೊಟ್ಟಿದ್ದು, ಹೆಗಲ ಮೇಲೊಂದು ಅಡ್ಡಲಾಗಿ ಕೋಲನ್ನು ಬಲಗೈಯಿಂದ ಹಿಡಿದಿದ್ದು ಕೋಲಿನ ಹಿಂದುಗಡೆ ಮತ್ತು ಮುಂದುಗಡೆಯ ತುದಿಗಳಲ್ಲಿ ಇಳಿಬಿಟ್ಟಿರುವ ಜಾಳಿಗೆಯಲ್ಲಿ ಹಿಂದೆ ನಾಲ್ಕು ಗಡಿಗೆಗಳು ಮುಂದುಗಡೆ ನಾಲ್ಕು ಗಡಿಗೆಗಳು ಇದ್ದು, ಕೆಳಗೆ ಕಪ್ಪಾಗಿ ದೊಡ್ಡದಾದ ಗಡಿಗೆ ಇದ್ದು, ಅದರ ಮೇಲೆ ಬಿಳಿಯ ಗಡಿಗೆ ನಂತರ ಕೆಂಪು ಗಡಿಗೆ ಅದರ ಮೇಲೆ ಚಿಕ್ಕದಾದ ಹಳದಿ ಗಡಿಗೆಯನ್ನು ಇಡಲಾಗಿದೆ. ಕೆಳಗಿನಿಂದ ಮೇಲೆ ಬಂದಂತೆ ಚಿಕ್ಕದಾಗುತ್ತ ಬಂದ ಗಡಿಗೆಗಳು ಎರಡೂ ಬದಿಯಲ್ಲಿ ಹೀಗೆ ಇಟ್ಟು ಹೊತ್ತುಕೊಂಡು ಹೊರಟಿರುವ ದೃಶ್ಯವು ಅಂದಿನ ನೆನಪುಗಳನ್ನು ತರುತ್ತದೆ. ಈ ಕಲಾಕೃತಿಯು ೪"x೫" ಇಂಚು ಅಳತೆಯಲ್ಲಿ ರಚನೆಗೊಂಡಿದೆ.

ಈ ಕಲಾಕೃತಿಗಳಲ್ಲಿ Movement ಜೊತೆಗೆ ವಸ್ತುಗಳ (ಗಡಿಗೆಗಳ) un semetrical form ಗಳನ್ನಾಗಿ ಬಳಸಿಕೊಂಡಿದ್ದು, ವರ್ಣಗಳ ಸಮತೋಲನವು ಕಾಯ್ದುಕೊಂಡಿದ್ದು, ಒಟ್ಟಾರೆ ಚಿತ್ರದಲ್ಲಿ ಚಲನೆಯನ್ನು ತೋರಿಸಲಾಗಿದೆ.

**೫. ಹಾಲನ್ನು ಹಿಂಡುತ್ತಿರುವ ಮಹಿಳೆ:**

ಮರವೊಂದರ ಕೆಳಗಡೆಯಲ್ಲಿ ಆಕಳನ್ನು ಹಗ್ಗದಿಂದ ಕಟ್ಟಿದ್ದು, ಅದು ತನ್ನ ಮುಖ ಮೇಲೆ ಮಾಡಿಕೊಂಡು ನೋಡುತ್ತಿದೆ. ಎಡಗಾಲನ್ನು ಮೇಲೆ ಎತ್ತಿಕೊಂಡಿದ್ದು ಬಲಗಾಲನ್ನು ನೆಲಕ್ಕೂರಿದೆ. ಹಿಂದಿನ ಎರಡೂ ಕಾಲುಗಳನ್ನು ಹಿಂದೆ ಮುಂದೆ ಇಟ್ಟುಕೊಂಡಿದ್ದು, ಮಹಿಳೆಯೋರ್ವಳು ಹಸಿರು ಸೀರೆ ಮತ್ತು ಕೆಂಪುರವಿಕೆಯಕೆಯನ್ನುಟ್ಟುಕೊಂಡು ಪಾತ್ರೆಯಲ್ಲಿ ಹಾಲನ್ನು ಹಿಂಡುತ್ತಿರುವ ದೃಶ್ಯವಿದೆ. ಇದು ಅಂದಿನ ಸ್ಥಳೀಯ ಪ್ರಭಾವವನ್ನು ಹೊಂದಿರುವುದು ಕಂಡುಬರುತ್ತದೆ. ಹಿನ್ನೆಲೆಯಲ್ಲಿ ಕೆಂಪುವರ್ಣವನ್ನು ಲೇಪಿಸಿರುವರು. ಈ ಕಲಾಕೃತಿಯು ೪"x೫" ಇಂಚು ಅಳತೆಯನ್ನು ಹೊಂದಿದೆ.

**೬. ಕಾಯಿಪಲ್ಲೆ ಮಾರುತ್ತಿರುವ ದೃಶ್ಯ:**

ಬಲಬದಿಯಲ್ಲಿ ಹಸಿರು ಸೀರೆ ಕೆಂಪಾದ ರವಿಕೆಯನ್ನು ಹಾಕಿಕೊಂಡಿದ್ದು, ಎದುರುಗಡೆಯಲ್ಲಿ ಕಾಯಿಪಲ್ಲೆ ಹಣ್ಣುಗಳನ್ನು ಇಟ್ಟುಕೊಂಡು ಕುಳಿತಿದ್ದು ಏನನ್ನೋ ಕೊಡುತ್ತಿರುವಳು ಎದುರಿನಲ್ಲಿ ನಿಂತುಕೊಂಡಿರುವ ಮಹಿಳೆ ಬಿಳಿಯ ಬಣ್ಣದ ಸೀರೆಯನ್ನುಟ್ಟುಕೊಂಡಿದ್ದು ಅದರಲ್ಲಿ ಬಂಗಾರವರ್ಣದ ಚುಕ್ಕೆಗಳ ನಕ್ಷೆಯನ್ನು ಮಾಡಿದ್ದು, ಸೀರೆಯ ಅಂಚು ಮತ್ತು ದಡಿಗಳನ್ನು ಬಂಗಾರದ ವರ್ಣದಿಂದ

ತೆಗೆದುಕೊಳ್ಳುತ್ತಿರುವ ಈ ಸಂಯೋಜನೆಯು ಅಲ್ಲಲ್ಲಿ ಹಾಳಾಗಿದ್ದು ಹಿನ್ನೆಲೆಯಲ್ಲಿ ಕೆಂಪುವರ್ಣವನ್ನು ಲೇಪಿಸಲಾಗಿದೆ. ಈ ಕಲಾಕೃತಿಯೂ ಸಮಕಾಲಿನ ಸಂದರ್ಭವನ್ನು ಸೂಚಿಸುತ್ತಿದ್ದು, ೪"x೫" ಇಂಚು ಅಳತೆಯಲ್ಲಿ ರಚನೆಗೊಂಡಿದೆ.

ಹೀಗೆ ಸ್ಥಳೀಯ ಪ್ರಭಾವದೊಂದಿಗೆ ಸಮಕಾಲಿನ ಕಲೆಯು ಅತ್ಯುತ್ತಮ ಚಿತ್ರಗಳಾಗಿರುವ ಉದಾಹರಣೆಯಾಗಿವೆ. ಐತಿಹಾಸಿಕ ಹಿನ್ನೆಲೆಯಲ್ಲೂ ಈ ಭಿತ್ತಿಚಿತ್ರಗಳು ಮಹತ್ವವಾದವುಗಳಾಗಿವೆ.

ಈ ಸಂಕೀರ್ಣ ಚಿತ್ರಗಳಲ್ಲಿ ವಿವಿಧ ಧರ್ಮಗಳ ಆಯಾ ಸಂಸ್ಕೃತಿಗಳಿಗೆ ಮತ್ತು ಉಡುಗೆ ತೊಡುಗೆಗಳಿಗೆ ಅನುಗುಣವಾಗಿ ಚಿತ್ರಿಸಲ್ಪಟ್ಟ ಈ ಕಲಾಕೃತಿಗಳು ಆಕಾರ, ಗಾತ್ರ, ಪ್ರಮಾಣಗಳನ್ನು ಪರಿಶೀಲಿಸಿದಾಗ ಜಾನಪದ ಕಲಾವಿದರು ರಚಿಸಿರುವ ಸಾಧ್ಯತೆಗಳಿವೆ. ಇಲ್ಲವೇ ಜಾನಪದೀಯ ಅಂಶಗಳನ್ನು ಇಟ್ಟುಕೊಂಡು ರಚಿಸಿರಲೂ ಬಹುದು ಈ ಕೃತಿಗಳಲ್ಲಿ ಸ್ಥಳೀಯ ಪ್ರಭಾವವಿರುವುದು ಕಂಡುಬರುತ್ತವೆ.

**II. ಕ. ಪ್ರಾಂತೀಯ ಸರ್ಧಾರ್‌ರು :**

ಈ ಪ್ರಾಂತೀಯ ಸರ್ದಾರ್‌ರುಗಳ ಚಿತ್ರಗಳು ದಖ್ಖನ್ ಮತ್ತು ರಾಜಸ್ಥಾನಿ ಕಲೆಗಳಿಂದ ಪ್ರೇರಿತಗೊಂಡಿದ್ದು, ದಖ್ಖನ್‌ದ ಭಾವನೆಗಳು ರಜಪೂತರ ಕಲಾತಂತ್ರಗಳು ಇಲ್ಲಿ ಮೇಳವಿಸಿರುವುದು ಕಂಡುಬರುತ್ತದೆ. ಈ ಕಿರುರೂಪದ ಚಿತ್ರಗಳು ಪ್ರಮುಖ (ದೊಡ್ಡ) ಮಾಡಿನ (ಹೂದೋಟದಲ್ಲಿ ಗೋಪಿಕಾ ಸ್ತ್ರೀಯರೊಂದಿಗೆ ಶ್ರೀಕೃಷ್ಣನಿರುವ ಭಿತ್ತಿ ಚಿತ್ರದ) ಬಲಬದಿಯಲ್ಲಿ ೪"x೫" ಇಂಚು ಅಳತೆಯಲ್ಲಿ ಸುಮಾರು ಆರು ಜನ ಪ್ರಾಂತೀಯ ಸರ್ದಾರ್‌ರನ್ನು ಒಂದರಮೇಲೊಂದರಂತೆ ಚಿತ್ರಿಸಲಾಗಿದೆ.

**೧. ಮರಾಠಾ ಯೋಧ:**

ಈ ಮರಾಠಾಯೋಧನು ಶಸ್ತ್ರಸಜ್ಜಿತನಾಗಿ ನಿಂತಿರುವ ದೃಶ್ಯವಿದೆ. ಈ ಯೋಧನು ಕೇಸರಿ ವರ್ಣದ ಜುಬ್ಬಾ ಪೈಜಾಮ್ ಧರಿಸಿದ್ದು, ಹಸಿರು ವರ್ಣದ ಶಾಲನ್ನು ನಡುವಿನಲ್ಲಿ ಕಟ್ಟಿದ್ದು ಶಾಲಿನ ದಡಿಯು ಹಳದಿ ವರ್ಣದಲ್ಲಿದೆ. ಕೊರಳಲ್ಲಿ ಕಪ್ಪುಪಟ್ಟಿಯಿದ್ದು, ಈ ಬಟ್ಟೆಗಳಲ್ಲಿ ಅಂದವಾದ ನಕ್ಷೆಯನ್ನು ಮಾಡಿದ್ದು ಅಂಚು ದಡಿಗಳಲ್ಲಿ ಬಂಗಾರದ ವರ್ಣದಿಂದ ಅಲಂಕಾರಗೊಳಿಸಲಾಗಿದೆ. ಈ ಯೋಧನು ಬಲಗೈಯಲ್ಲಿ ಕಂದುಬಣ್ಣದ ಬಂದೂಕನ್ನು ಭುಜಕ್ಕೆ ವಾಲಿಕೊಂಡು ಹಿಡಿದಿದ್ದಾನೆ. ಯೋಧನ ಎಡಗೈಯಲ್ಲಿ ಕಪ್ಪು ಕವಚ ಧರಿಸಿದ ಖಡ್ಗವನ್ನು ಮತ್ತು ಕಪ್ಪು ಬಣ್ಣದಲ್ಲಿರುವ ಗುರಾಣಿ ಹಿಡಿದಿದ್ದು, ಕೆಂಪು ಮಿಶ್ರಿತ ಕಂದುಬಣ್ಣದ ಬಂದೂಕಿನ ಗುಂಡಿನ ಚೀಲವನ್ನು ಎಡಭುಜಕ್ಕೆ ಹಾಕಿರುವನು. ಹೀಗೆ ಶಸ್ತ್ರ ಸಜ್ಜಿತನಾಗಿರುವ ಮರಾಠಾ ಯೋಧನ ಕುಡಿಮೀಸೆ ಮತ್ತು ತೀಕ್ಷ್ಣವಾದ ಕಣ್ಣುಗಳು ಯೋಧನ ಅಂದವನ್ನು ಇಮ್ಮಡಿಗೊಳಿಸಿವೆ. ಇದು ದಖ್ಖನ್ ಮತ್ತು ರಾಜಸ್ಥಾನಿ ಶೈಲಿಯಲ್ಲಿ ರೂಪುಗೊಂಡಿದೆ.

**೨. ಸುಲ್ತಾನ್ ಯೋಧ:**

ಈ ಸುಲ್ತಾನ್ ಯೋಧನು ಶಸ್ತ್ರಸಜ್ಜಿತನಾಗಿ ನಿಂತಿರುವ ದೃಶ್ಯವಿದೆ. ಈ ಯೋಧನು ಹಳದಿವರ್ಣದ ಜುಬ್ಬಾ ಧರಿಸಿದ್ದು, ಪಾರದರ್ಶಕವಾದ ಈ ಜುಬ್ಬಾವು ನಕ್ಷೆಯನ್ನು ಒಳಗೊಂಡಿದೆ. ಕಡುಗೆಂಪು ಬಣ್ಣದ ದೇಹವನ್ನು ಹೊಂದಿದ್ದು, ದಾಡಿ ಮೀಸೆಗಳು ಕಪ್ಪನೆಯ ವರ್ಣದಲ್ಲಿವೆ. ಉದ್ದನೆಯ ಟೊಪ್ಪಿಗೆ ತಲೆಗೆ ಹೊಂದಿಕೊಂಡು ಹಳದಿ ವರ್ಣದ ಪಟ್ಟಿಯನ್ನು ಹೊಂದಿದ ಈ ಟೊಪ್ಪಿಗೆಯು ವಿಶೇಷವಾಗಿದೆ. ಎಡಭುಜಕ್ಕೆ ಹೊಂದಿಕೊಂಡು ಎಡಗೈಯಲ್ಲಿ ಹಿಡಿದುಕೊಂಡಿರುವ ಈಟಿ ಎಡಗಡೆ ಬಗಲಲ್ಲಿ ಕಪ್ಪು ಕವಚ ಧರಿಸಿದ ಖಡ್ಗ ಹಾಗೂ ಕಂದುಗೆಂಪು ಬಣ್ಣದಲ್ಲಿರುವ ಗುರಾಣಿಯನ್ನು ಚಿತ್ರಸಿದ್ದು ಇದು ದಖ್ಖನ್ ಕಲಾಶೈಲಿಯಲ್ಲಿ ರೂಪುಗೊಂಡಿದೆ.

**೩. ರಜಪೂತ್ ಯೋಧ:**

ಈ ರಜಪೂತ್ ಯೋಧನು ಶಸ್ತ್ರಸಜ್ಜಿತನಾಗಿ ನಿಂತಿರುವ ದೃಶ್ಯವಿದೆ. ಈ ಯೋಧನು ಗುಲಾಬಿ ವರ್ಣದ ಮೇಲುಡುಗೆಯನ್ನು ಹೊಂದಿದ್ದು, ಕಡುಹಸಿರುವರ್ಣದ ಪೈಜಾಮ್ ಧರಿಸಿದ್ದು ಈ ಉಡುಗೆಯಲ್ಲಿ ನಕ್ಷೆಗಳನ್ನು ಚಿತ್ರಿಸಿದ್ದು ಬಲಗೈಯಲ್ಲಿ ಭರ್ಚಿಯನ್ನು ಲಂಬವಾಗಿ ಹಿಡಿದುಕೊಂಡಿದ್ದು, ಎಡಗೈಯಲ್ಲಿ ಗುರಾಣಿಯನ್ನು ಹಿಡಿದುಕೊಂಡಿರುವನು. ಈ ಗುರಾಣಿಯ ವರ್ಣವು ಕಪ್ಪಾಗಿದೆ. ಹಸಿರು ಕವಚದಲ್ಲಿರುವ ಖಡ್ಗ ಸೊಂಟಕ್ಕೆ ಕಟ್ಟಿಕೊಂಡಿರುವನು. ತೀಕ್ಷ್ಣವಾದ ಕಣ್ಣುಗಳು, ಮೀಸೆಯು ಸುರುಳಿಯಾಕಾರದಲ್ಲಿ ಗಲ್ಲದ ಮೇಲಕ್ಕೆ ತಿರುವಿಕೊಂಡಿದ್ದು, ತಲೆಗೆ ಹಾಕಿಕೊಂಡಿರುವ ಟೊಪ್ಪಿಗೆಯು ಉದ್ದವಾಗಿ ಮೇಲಕ್ಕೆ ಹೋದಂತೆ ಚೂಪಾಗಿರುವುದು ವಿಶೇಷವಾಗಿದೆ. ಹೀಗೆ ವಿಶಿಷ್ಟ ರೂಪದಲ್ಲಿ ಮೂಡಿಬಂದಿರುವ ರಜಪೂತ್ ಯೋಧನ ಚಿತ್ರವು ಕೆಂಪುವರ್ಣದ ಹಿನ್ನೆಲೆಯನ್ನು ಹೊಂದಿದೆ.

**೪. ಮೊಘಲ್ ಯೋಧ:**

ಈ ಮೋಘಲ್ ಯೋಧನು ಹಳದಿವರ್ಣದ ಮೇಲುಡುಗೆಯು ಪಾರದರ್ಶಕವಾಗಿದ್ದು, ಜುಬ್ಬಾ ಪೈಜಾಮ ಕೆಂಪುವರ್ಣದಲ್ಲಿದ್ದು ಈ ಯೋಧನ ಮೈಬಣ್ಣವು ತಿಳಿಗುಲಾಬಿ ವರ್ಣದಲ್ಲಿದ್ದು ಬಲಗಡೆಯ ಕೈಯಲ್ಲಿ ಏನನ್ನೋ ಹಿಡಿದುಕೊಂಡು ತದೇಕಚಿತ್ತದಿಂದ ನೋಡುತ್ತಿರುವನು ತಲೆಯ ಮೇಲೆ ಟೊಪ್ಪಿಗೆ ಇದ್ದು ಮೇಲ್ಗಡೆ ಹೋದಂತೆ ಚೂಪಾಗಿದೆ. ಎಡಗಡೆಯ ಕೈಯಲ್ಲಿ ಭರ್ಜಿಯೊಂದನ್ನು ಹಿಡಿದುಕೊಂಡಿದ್ದು ಬಲಗಡೆಯ ಬಗಲಲ್ಲಿ ಕಪ್ಪು ವರ್ಣದ ಚೀಲವೊಂದಿದ್ದು ಅವನು ಧರಿಸಿದ ದುಪ್ಪಟ್ಟಾದ ವರ್ಣವೂ ಕಪ್ಪಾಗಿದೆ. ಅಂಚು ಮತ್ತು ದಡಿಯು ಬಂಗಾರದ ವರ್ಣದಿಂದ ಚಿತ್ರಿಸಿರುವರು. ಉಡುಗೆ ತೊಡುಗೆಗಳೆಲ್ಲವು ಮೋಘಲ್ ಶೈಲಿಯನ್ನು ಹೋಲುತ್ತಿದ್ದು ಅಲಂಕಾರದಲ್ಲಿ ರಜಪೂತ ಶೈಲಿಯ ಮಿಶ್ರಣವಾಗಿರುವುದು ಕಂಡುಬರುತ್ತದೆ.

**೫. ಮೈಸೂರು ಯೋಧ:**

ಈ ಮೈಸೂರು ಯೋಧನು ಧರಿಸಿರುವ ಜುಬ್ಬಾದ ವರ್ಣವು ಕೆಂಪಾಗಿದ್ದು, ಕೆಳಗಡೆ ಪೈಜಾಮ್ ಹಳದಿವರ್ಣದ್ದು ಮೇಲ್ಗಡೆಯ ಕೋಟು ಹಳದಿ ವರ್ಣದಲ್ಲಿದ್ದು ಸುಂದರವಾದ ನಕ್ಷೆಗಳಿಂದ ಕೂಡಿದೆ ತಲೆಗೆ ಮೈಸೂರು ಪೇಟಾ ಧರಿಸಿದ್ದು, ದಾಡಿಯನ್ನು ಬಿಟ್ಟಿದ್ದು ಬಹುಶಃ ಶ್ರೀರಂಗಪಟ್ಟಣದ ಹೈದರಾಲಿಯ ಆಸ್ಥಾನದ ಯೋಧನಿರಬಹುದೆಂದು ಊಹಿಸುತ್ತಿದ್ದು, ಬಲಗೈಯಲ್ಲಿ ಬಂದೂಕನ್ನು ಬಲಭುಜಕ್ಕೆ ಹತ್ತಿಕೊಂಡು ಹಿಡಿದುಕೊಂಡಿರುವನು. ಎಡಗಡೆಯ ಬಗಲಲ್ಲಿ ಗುಂಡುಗಳುಳ್ಳ ಬಂದೂಕಿನ ಚೀಲವನ್ನು ಹಾಕಿಕೊಂಡಿದ್ದು, ಎಡಗಡೆಯ ಸೊಂಟಕ್ಕೆ ಕಪ್ಪು ಕವಚ ಧರಿಸಿದ ಖಡ್ಗವನ್ನು ತೂಗು ಬಿಟ್ಟಿದ್ದು. ಕಪ್ಪುವರ್ಣದ ಗುರಾಣಿಯು ಎಡಗೈಯಲ್ಲಿದೆ. ಬಲಗಡೆಯ ಸೊಂಟದ ಸುತ್ತಲೂ ಕೆಂಪು ಮತ್ತು ಕಪ್ಪುವರ್ಣದ ಬ್ಯಾಗಗಳನ್ನು ಕಟ್ಟಿಕೊಂಡಿರುವನು. ಈ ಯೋಧನ ಉಡುಗೆ ತೊಡುಗೆಗಳನ್ನು ಗಮನಿಸಿದರೆ ಮೈಸೂರಿನ ಯೋಧನೇ ಆಗಿರುವ ಸಾಧ್ಯತೆಗಳಿವೆ.

**೬. ದಖ್ಖನ್ ಯೋಧ:**

ಇದು ದಖ್ಖನ್ ಹಾಗೂ ಮೋಘಲ್ ಶೈಲಿಗಳ ಮಿಶ್ರಣವಿರುವ ಕೃತಿಯಾಗಿದ್ದು, ಬಲಗೈಯಲ್ಲಿ ಬರ್ಚಿಯನ್ನು ಹಿಡಿದುಕೊಂಡಿದ್ದು ಎಡಗೈಯನ್ನು ಮೇಲಕ್ಕೆತ್ತಿ ಏನನ್ನೋ ತೋರಿಸುತ್ತಿದ್ದು, ಕಡುಹಸಿರು ವರ್ಣದ ಜುಬ್ಬಾ ಹಾಕಿಕೊಂಡಿದ್ದು ಮೇಲುಡುಗೆಯಾಗಿ ಹಳದಿವರ್ಣದ ಪಾರದರ್ಶಕ ಉಡುಗೆಯನ್ನು ತೊಟ್ಟಿದ್ದು ಹಸಿರು ವರ್ಣದ ದುಪ್ಪಟ್ಟಾ ಹಾಕಿಕೊಂಡಿದ್ದು ಅದರ ಅಂಚು ಮತ್ತು ದಡಿಗಳು ಬಂಗಾರವರ್ಣದಿಂದ ತುಂಬಿರುವರು. ಒಟ್ಟಾರೆಯಾಗಿ ಈ ಯೋಧನ ಕಲಾಕೃತಿಯು ದಖ್ಖನ್ ಮತ್ತು ಮೋಘಲ್ ಶೈಲಿಗಳ ಪ್ರಭಾವವಿರುವುದು ಕಂಡುಬರುತ್ತದೆ.

ಮೇಲೆ ಚಿತ್ರಿತವಾದ ಪ್ರಾಂತೀಯ ಸರ್ಧಾರ್‌ರುಗಳ ಚಿತ್ರಗಳಲ್ಲಿ ಆಯುಧಗಳೊಂದಿಗೆ ನಿಂತುಕೊಂಡಿರುವ ಸರ್ಧಾರ್‌ರ ಮುಖಗಳಲ್ಲಿ ಗಂಭೀರ ಭಾವನೆಗಳನ್ನು ವ್ಯಕ್ತಪಡಿಸಿದ್ದು ವೀರಾವೇಶ ಸನ್ನಿವೇಶವನ್ನು ಸೃಷ್ಠಿಸಿರುವುದು ಕಂಡುಬರುತ್ತದೆ. ಏಕವ್ಯಕ್ತಿಯ ಸಂಯೋಜನೆಯನ್ನು ಹೊಂದಿರುವ ಈ ಅಕಾರಗಳು ಪ್ರಮಾಣಬದ್ಧವಾಗಿ ಮೂಡಿಬಂದಿವೆ.

**III. ತುಳಜಾಭವಾನಿ ದೇವಸ್ಥಾನದ ಹೆಬ್ಬಾಗಿಲು:**

ದೊಡ್ಡದಾದ ಮಾಡಿನಲ್ಲಿ ೩೪"x೨೨" ಇಂಚುಗಳ ಅಳತೆಯಲ್ಲಿ ಈ ಸಂಯೋಜನೆಯನ್ನು ಮಾಡಲಾಗಿದ್ದು, ನಿಪ್ಪಾಣಿಯ ಸಿದ್ಧೋಜಿರಾವ್ ನಿಂಬಾಳಕರ್ ಅವರ ಮನೆಯ ಕುಲದೇವತೆಯಾದ ಶ್ರೀ ತುಳಜಾಭವಾನಿಯ ಸುಂದರವಾದ ಮತ್ತು ಭವ್ಯವಾದ ದೇವಾಲಯವೊಂದನ್ನು ಮಮದಾಪೂರದಲ್ಲಿ

ಕಟ್ಟಿದ್ದು, ಆ ದೇವಸ್ಥಾನದ ದ್ವಾರಬಾಗಿಲನ್ನು ಈ ಪ್ರಮುಖ ಮಾಡಿನಲ್ಲಿ ಚಿತ್ರಿಸಲಾಗಿದೆ. ಎದುರಿಗೆ ಅಂದವಾಗಿ ದ್ವಾರಬಾಗಿಲನ್ನು ನಿರ್ಮಿಸಿದ್ದು, ಒಳಗಡೆಯ ಶ್ರೀತುಳುಜಾಭವಾನಿಯ ಮೂರ್ತಿಯು ಕಾಣುತ್ತಿದ್ದು, ಈ ದೇವಿಯ ಎಡಗಡೆಯಲ್ಲಿ ಧೋತ್ರ ಮತ್ತು ಅಂಗಿಯನ್ನುಟ್ಟಿರುವ ಹಾಗೂ ತಲೆಗೆ ರುಮಾಲನ್ನು ಸುತ್ತಿರುವ ವ್ಯಕ್ತಿಯೊಬ್ಬನು ಕಾಣುತ್ತಿದ್ದು, ಇವೆಲ್ಲ ಅಸ್ಪಷ್ಟವಾಗಿ ಕಾಣುತ್ತಿವೆ. ಆದರೆ ದ್ವಾರಬಾಗಿಲು ಅಂದವಾಗಿದ್ದು, ಅದನ್ನು ಹತ್ತಿ ಹೋಗಲು ಮೆಟ್ಟಲುಗಳನ್ನು ತೋರಿಸಲಾಗಿದೆ. ಈ ದ್ವಾರಬಾಗಿಲಿನ ಬಲಗಡೆಯಲ್ಲಿ ನಿಪ್ಪಾಣಿ ಮನೆತನದ ರಾಣಿಯೋರ್ವಳು ಎಡಗೈಯ ತಟ್ಟೆಯಲ್ಲಿ ಏನೋ ವಸ್ತುವನ್ನು ಹಿಡಿದುಕೊಂಡಿದ್ದು, ಹಿಂದುಗಡೆಯಲ್ಲಿರುವ ಬಾಲಕನನ್ನು ಹೊರಳಿ ನೋಡುತ್ತ ಆ ಬಾಲಕನಿಗೆ ಏನನ್ನೋ ನೀಡುತ್ತಿರುವುದು ಆ ಬಾಲಕ ಓಡಿಬಂದು ತನ್ನ ಕೈಗಳನ್ನು ಮೇಲೆತ್ತಿ ತೆಗೆದುಕೊಳ್ಳುವ ದೃಶ್ಯ ಸುಂದರವಾಗಿ ಮೂಡಿಬಂದಿದೆ. ರಾಣಿಯು ನಿಂತಿರುವ ಭಂಗಿಯೂ ಸುಂದರವಾಗಿ ಕಂಡುಬರುತ್ತದೆ. ಕಚ್ಚೆಯನ್ನು ಹಾಕಿಕೊಂಡು ಸಿರೆಯನ್ನು ಉಟ್ಟಿದ್ದು, ಕೇಸರಿ ಮಿಶ್ರಿತ ಹಳದಿಯ ವರ್ಣದಲ್ಲಿರುವ ಸೀರೆಯ ನಕ್ಷೆಯಿಂದಾಗಿ ಹಾಗೂ ಅಂಚು ದಡಿಗಳಿಗೆ ಬಳಸಿದ ಬಂಗಾರದ ವರ್ಣವು ರಾಣಿಯ ಅಂದವನ್ನು ಇಮ್ಮಡಿಗೊಳಿಸಿದೆ. ಬಳೆಗಳು, ಮೂಗುತಿ, ಕುಂಕುಮ ಹಾಗೂ ಕೊರಳಲ್ಲಿಯ ಅಭರಣಗಳು ಸ್ಥಳೀಯ ಪ್ರಭಾವದೊಂದಿಗೆ ರಜಪೂತ ಶೈಲಿಯ ಪ್ರಭಾವವಿರುವುದು ಕಂಡುಬರುತ್ತದೆ. ಇದೇ ದ್ವಾರಬಾಗಿಲಿನ ಎಡಗಡೆಯಲ್ಲಿ ಇನ್ನೊರ್ವ ರಾಜಕುಮಾರಿಯು ತನ್ನ ಎರಡೂ ಕೈಗಳಲ್ಲಿ ತಟ್ಟೆಯೊಂದನ್ನು ಹಿಡಿದುಕೊಂಡು ಪ್ರವೇಶಿಸುತ್ತಿರುವ ದೃಶ್ಯವು ಸುಂದರವಾಗಿ ಮೂಡಿಬಂದಿದೆ.

**III. ಅ. ಬೇರೆ ಬೇರೆ ರಾಜಕುಮಾರರ ಚಿತ್ರಗಳು:**

ನಿಪ್ಪಾಣಿ ಸಂಸ್ಥಾನದೊಂದಿಗೆ ಉತ್ತಮ ಸಂಬಂಧ ಹೊಂದಿದ ವಿವಿಧ ರಾಜಕುಮಾರರ ಚಿತ್ರಗಳನ್ನು ಚಿತ್ರಿಸಿದ್ದು, ಮರಾಠರು, ಸುಲ್ತಾನರು, ರಜಪೂತ ರಾಜಕುಮಾರರ ಚಿತ್ರಗಳ್ನನು ಈ ವಾಡೆಯ ಭಿತ್ತಿಯಲ್ಲಿ ಚಿತ್ರಿಸಿದ್ದು ದೊಡ್ಡದಾದ ಮಾಡಿನ ಭಿತ್ತಿಯಲ್ಲಿ "ತುಳುಜಾಭವಾನಿ ದೇವಸ್ಥಾನದ ದ್ವಾರಬಾಗಿಲು" ಚಿತ್ರದ ಬಲಬದಿಯ ಅಂತ್ಯದ ಸಾಲಿನಲ್ಲಿ ಈ ರಾಜಕುಮಾರರ ಚಿತ್ರಗಳು ಒಂದರ ಮೇಲೊಂದರಂತೆ ಚಿತ್ರಸಲಾಗಿದೆ. ಈ ಕಲಾಕೃತಿಗಳನ್ನು ೫೧/೨"x೫೧/೨" ಅಳತೆಯಲ್ಲಿ ರಚಿಸಲಾಗಿದೆ.

**೧. ಮರಾಠಾ ರಾಜಕುಮಾರ:**

ಮರಾಠಾ ದೊರೆ ತೆಳುಗುಲಾಬಿವರ್ಣದ ಜುಬ್ಬಾ ಪೈಜಾಮ್ ಧರಿಸಿದ್ದು, ಹಳದಿ ಮೇಲುಡುಗೆಯು ಪಾರದರ್ಶಕವಾಗಿದ್ದು, ನಕ್ಷೆಯಿಂದ ಕೂಡಿದೆ. ಸೊಂಟಕ್ಕೆ ಕಂದುಗೆಂಪು ವರ್ಣದ ಬಿಲ್ಲೆಯನ್ನು ಸುತ್ತಿಕೊಂಡಿದ್ದು, ಈ ನಡುಪಟ್ಟಿಯ ಅಂಚು ಹಾಗೂ ದಡಿಯನ್ನು ಬಂಗಾರದ ವರ್ಣದಿಂದ ರಚಿಸಲಾಗಿದೆ. ಎಡಗಡೆಯ

ಸೊಂಟಕ್ಕೆ ಕಪ್ಪುಕವಚ ಧರಿಸಿದ ಖಡ್ಗವನ್ನು ತೂಗುಬಿಟ್ಟಿದ್ದು, ತಲೆಗೆ ಹಳದಿ ಟೊಪ್ಪಿಗೆಯನ್ನು ಹಾಕಿಕೊಂಡಿದ್ದು, ಮೇಲ್ಗಡೆ ಹೋದಂತೆ ಚೂಪಾಗಿದೆ. ಬಲಗೈಯಲ್ಲಿ ಹೂವೊಂದನ್ನು ಹಿಡಿದುಕೊಂಡು ನೋಡುತ್ತಾ ನಿಂತಿರುವ ಮರಾಠಾಯೋಧ. ಕಪ್ಪಾದ ಮೀಸೆ ಮತ್ತು ದಾಡಿಯನ್ನು ಬಿಟ್ಟಿದ್ದು, ಮರಾಠಾ ಛತ್ರಪತಿ ಶಿವಾಜಿ ಮಹಾರಾಜನ ಚಿತ್ರದಂತಿದೆ.

**೨. ಬ್ರಿಟೀಷ ರಾಜಕುಮಾರ:**

ಈ ರಾಜಕುಮಾರನು ಕಪ್ಪುವರ್ಣದ ಕೋಟನ್ನು ಧರಿಸಿದ್ದು, ಕಪ್ಪುವರ್ಣದ ಮೈಗೆ ಹತ್ತಿಕೊಂಡಿದ್ದ ಪ್ಯಾಂಟ ತಲೆಯ ಮೇಲೆ ಇಂಗ್ಲೀಷ ಟೋಪ್ಪಿಗೆಯನ್ನು ಧರಿಸಿದ್ದು, ಬಲಗೈಯಲ್ಲಿ ಬೆತ್ತವನ್ನು ಹಿಡಿದುಕೊಂಡಿರುವನು. ಎಡಗಡೆಯ ಸೊಂಟದಲ್ಲಿ ಕೆಂಪು ಕವಚ ಧರಿಸಿದ ಖಡ್ಗ ತೂಗುಬಿಟ್ಟಿದ್ದು, ಸೊಂಟಕ್ಕೆ ಬೆಲ್ಟ್ ಹಾಕಿಕೊಂಡಿದ್ದು, ರಾಜ ಠೀವಿಯಿಂದ ನಡೆಯುತ್ತಿರುವ ದೃಶ್ಯ ಸುಂದರವಾಗಿ ಮೂಡಿಬಂದಿದೆ.

**೩. ರಜಪೂತ್ ರಾಜಕುಮಾರ:**

ಈ ರಜಪೂತ ದೊರೆ ಹಳದಿ ವರ್ಣದ ಜುಬ್ಬಾ ಧರಿಸಿಕೊಂಡಿದ್ದು ನಕ್ಷೆಯುಳ್ಳ ಪಾರದರ್ಶಕ ಈ ಉಡುಗೆಯಲ್ಲಿ ಬಂಗಾರದ ವರ್ಣವನ್ನು ಬಳಸಿದ್ದು, ಬಲಗಡೆ ಸೊಂಟದಲ್ಲಿ ಕಪ್ಪು ಕವಚದ ಖಡ್ಗ ಧರಿಸಿದ್ದು ಎಡಗಡೆಯಲ್ಲಿ ಗುರಾಣಿಯನ್ನು ಸೊಂಟಕ್ಕೆ ಇಳಿಬಿಟ್ಟಿದ್ದು, ಎಡಗೈಯಲ್ಲಿ ಮುತ್ತಿನ ಸರವನ್ನು ಹಿಡಿದುಕೊಂಡಿದ್ದು ಬಲಗೈಯಲ್ಲಿ ಕೆಂಪುವರ್ಣದ ವಸ್ತುವನ್ನು ಹಿಡಿದುಕೊಂಡು ನಿಂತಿರುವ ದೃಶ್ಯವಿದೆ. ರಜಪೂತ ಶೈಲಿಯ ಲಕ್ಷಣವನ್ನು ಹೊಂದಿದ್ದು ಕಂಡುಬರುತ್ತದೆ.

**೪. ಮೊಘಲ್ ರಾಜಕುಮಾರ:**

ಈ ಮೋಘಲ್ ದೊರೆ ಹಳದಿವರ್ಣದ ಜುಬ್ಬಾ ಧರಿಸಿದ್ದು ಹಸಿರುವರ್ಣದ ಪೈಜಾಮು ಧರಿಸಿದ್ದು, ಹಳದಿ ವರ್ಣದ ಪಾರದರ್ಶಕ ಮೇಲುಡುಗೆಯಲ್ಲಿ ಬಂಗಾರ ವರ್ಣದ ಅಂಚು ಹಾಗೂ ದಡಿಯನ್ನು ಮಾಡಲಾಗಿದೆ. ಕಪ್ಪುವರ್ಣದ ಟೊಪ್ಪಿಗೆಯನ್ನು ಹಾಕಿಕೊಂಡಿದ್ದು, ಮೆಲ್ಗಡೆ ಹೋದಂತೆ ಹಿಂದೆ ಬಾಗಿದ್ದು, ಚೂಪಾಗುತ್ತ ಹೋಗಿದೆ. ಬಲಗೈಯಲ್ಲಿ ಗುಲಾಬಿಯ ಹೂವನ್ನು ಹಿಡಿದುಕೊಂಡು ನಿಂತಿದ್ದು ಎಡಗಡೆಯ ಸೊಂಟದಲ್ಲಿ ಗುರಾಣಿ ಮತ್ತು ಕಪ್ಪು ಕವಚದಲ್ಲಿರುವ ಖಡ್ಗವು ಜೋತಾಡುತ್ತಿವೆ. ಮೋಘಲ್ ಶೈಲಿಯ ಲಕ್ಷಣಗಳನ್ನು ಹೊಂದಿರುವುದು ಕಂಡುಬರುತ್ತದೆ.

**೫. ದಖ್ಖನ್ ರಾಜಕುಮಾರ:**

ಈ ದಖ್ಖನ್ ದೊರೆ ತಿಳಿಕಂದುಗೆಂಪುಬಣ್ಣದ ನಿಲುವಂಗಿ ಕೆಂಪುವರ್ಣದ ದುಪ್ಪಟ್ಟಾ ಧರಿಸಿದ್ದು, ಬಂಗಾರ ವರ್ಣದ ಅಂಚು ಹಾಗೂ ದಡಿಯನ್ನು ಮಾಡಲಾಗಿದ್ದು, ಬಲಗಡೆಯ ಕೈಯನ್ನು ಸೊಂಟದ

ಮೇಲಿಟ್ಟು ಎಡಗಡೆಯ ಸೊಂಟದಲ್ಲಿ ಹಳದಿವರ್ಣದ ಕವಚದಲ್ಲಿ ಖಡ್ಗವನ್ನುಧರಿಸಿದ್ದು ಕೊರಳಲ್ಲಿ ಕವಡೆಯಂತಹ ಸರವನ್ನು ಹಾಕಿಕೊಂಡಿದ್ದು, ತಲೆಯ ಮೇಲೆ ಹಿಂದುಗಡೆಗೆ ಬಾಗಿದ ಟೊಪ್ಪಿಗೆಯನ್ನು ಧರಿಸಲಾಗಿದೆ. ಈ ಚಿತ್ರವು ದಖ್ಖನ್ ಶೈಲಿಯ ಲಕ್ಷಣಗಳನ್ನು ಹೊಂದಿದೆ.

**೬. ಜಪಾನ್ ರಾಜಕುಮಾರ:**

ಈ ಕಲಾಕೃತಿಯನ್ನು ಅಧ್ಯಯನ ಮಾಡುವಾಗ ಇದು ದೇಶೀಯ ಚಿತ್ರಕಲೆಯ ತಂತ್ರಗಳನ್ನು ಹೊಂದಿದ್ದು ವಿದೇಶಿ ಉಡುಪು ಶೈಲಿಗಳನ್ನು ಹೊಂದಿದೆ. ಜಪಾನ್ ಚಿತ್ರಕಲೆಯ ಮಾದರಿಯನ್ನು ಹೊಂದಿದ ಈ ರಾಜಕುಮಾರನ ಚಿತ್ರವು. ಸಿಂಹಾಸನದಲ್ಲಿ ಬಲಗಾಲನ್ನು ಮಡಚಿಕೊಂಡಿದ್ದು, ಬಲಗೈಯನ್ನು ಮೇಲಿಟ್ಟುಕೊಂಡು ಕುಳಿತಿದ್ದು, ಎಡಗೈಯನ್ನು ಮಡಚಿಕೊಂಡು ತಲೆಗೆ ಆನಿಸಿಕೊಂಡಿರುವಂತೆ ಚಿತ್ರಿಸಲಾಗಿದೆ. ತಲೆಗೆ ಕೆಂಪುವರ್ಣದ ವಿದೇಶಿ ಟೊಪ್ಪಿಗೆಯನ್ನು ಧರಿಸಿದ್ದು, ರಾಜಗಾಂಭೀರ್ಯದಲ್ಲಿ ಕುಳಿತಿದ್ದು, ತೊಟ್ಟಿಲಾಕಾರದ ಕುರ್ಚಿಯ ಕೆಳಭಾಗದಲ್ಲಿ ನಾಯಿಯೊಂದು ಮಲಗಿಕೊಂಡಿದ್ದು, ಹೊರಳಿ ಹಿಂದುಗಡೆ ನೋಡುತ್ತಿರುವ ದೃಶ್ಯವಿದೆ. ಹಳದಿವರ್ಣದ ಶರ್ಟನ್ನು ಧರಿಸಿದ್ದು ಜಾಳಿಗೆಯಾಕಾರದ ನಕ್ಷೆಯನ್ನು ಹೊಂದಿದೆ. ಕೆಳಗಡೆಯ ಪ್ಯಾಂಟ ನೀಲಿಮಿಶ್ರಿತ ಹಸಿರು ವರ್ಣವನ್ನು ಹೊಂದಿರುವುದು ಕಂಡುಬರುತ್ತದೆ. ಈ ಜಪಾನ್ ರಾಜಕುಮಾರನ ರಾಜಗಾಂಭಿರ್ಯವೂ ಸುಂದರವಾಗಿ ಮೂಡಿಬಂದಿದೆ.

ಈ ನಿಪ್ಪಾಣಿ ಭಿತ್ತಿಚಿತ್ರಗಳಲ್ಲಿಯೇ ವಿಶಿಷ್ಠವಾದ ಶೈಲಿ ತಂತ್ರಗಳನ್ನು, ವೇಷಭೂಷಣ, ವಸ್ತುಗಳ ಬಳಕೆಯಲ್ಲೂ ಸಂಪೂರ್ಣ ಭಿನ್ನವಾಗಿರುವ ಈ ಕೃತಿಯನ್ನು ಆ ಸಂದರ್ಭದಲ್ಲಿ ಬಳಸಿರುವುದು ನಿಜಕ್ಕೂ ಅದ್ಭುತವಾಗಿದೆ. ಕಲಾವಿದರಿಗೆ ಅಗಲೇ ದೇಶ ವಿದೇಶದ ಕಲ್ಪನೆ ಅಷ್ಟೇ ಅಲ್ಲ ಆ ಕಲೆಯ ತಂತ್ರಗಳನ್ನು ಕರಗತಮಾಡಿಕೊಂಡಿರುವುದು ತಿಳಿದು ಬರುತ್ತದೆ. ಇಂಗ್ಲೆಂಡ, ಜಪಾನ್, ಚೈನಾ ದೇಶದ ದೊರೆಗಳ ಚಿತ್ರಗಳನ್ನು ರಚಿಸಿದ್ದು, ಚೀನಾದ ಚಿತ್ರವು ಬಹಳಷ್ಟು ಹಾಳಾಗಿರುವುದರಿಂದ ಪ್ರಕಟಿಸಲಾಗಿಲ್ಲ.

**III. ಬ. ಸಂಕೀರ್ಣ ಚಿತ್ರ:**

ಸರ್ವಧರ್ಮ ಸಹಿಷ್ಣುವಾಗಿರುವ ಶ್ರೀ ಸಿದ್ಧೋಜಿರಾವ್ ನಿಂಬಾಳಕರ್ ಅವರು ಶೈವ, ವೈಷ್ಣವ ಮತ್ತು ಸಿಕ್ ಹಾಗೂ ಮುಸ್ಲಿಂ ಧರ್ಮ ಗುರುಗಳು, ಸಂತರು, ಶಿವಶರಣರ, ಚಿತ್ರಗಳನ್ನು ಚಿತ್ರಿಸಲು ಪ್ರೋತ್ಸಾಹಿಸಿದ್ದುದು ತಿಳಿದುಬರುತ್ತದೆ.

**೧. ಶಿವಭಕ್ತ:**

ಈ ವ್ಯಕ್ತಿಯು ಮೇಲುಡುಗೆಯನ್ನು ಧರಿಸಿಕೊಂಡಿಲ್ಲ ಕೆಳಗಡೆ ಪಂಜೆಯನ್ನು ಉಟ್ಟುಕೊಂಡಿದ್ದು ಹುಲಿಯ ಚರ್ಮದಂತಹ ಬಟ್ಟೆಯನ್ನು ಸೊಂಟಕ್ಕೆ ಕಟ್ಟಿಕೊಂಡಿದ್ದು ಕಾಲಲ್ಲಿ ಸಾಧೂ ಸಂತರು ಧರಿಸುವ

ಪಾದರಕ್ಷೆಗಳಿವೆ. ಕೊರಳಲ್ಲಿ ರುದ್ರಾಕ್ಷಿ ಮಾಲೆಯನ್ನು ಧರಿಸಿದ್ದು, ತಲೆಯ ಮೇಲೆ ಋಷಿಗಳು ಕೂದಲುಗಳನ್ನು ಕಟ್ಟಿಕೊಂಡಿರುವಂತೆ ಕಟ್ಟಿಕೊಳ್ಳಲಾಗಿದೆ. ಎಡಗೈಯಲ್ಲಿ ಭರ್ಚಿಯೊಂದನ್ನು ಹಿಡಿದಿದ್ದು ಬಲಗೈಯಲ್ಲಿ ಪಕ್ಷಿಯೊಂದನ್ನು ಹಿಡಿದುಕೊಂಡಂತೆ ಕಾಣುತ್ತಿದ್ದು, ಅದು ಈಗ ಹಾಳಾಗಿದೆ. ಕಂದುಗೆಂಪುಬಣ್ಣದ ದೇಹವನ್ನು ಹೊಂದಿದ್ದು, ಇದು ಅಪ್ಪಟ ಶಿವನಭಕ್ತನಾಗಿ ಕಂಡುಬರುತ್ತದೆ ಇದು ದಖ್ಖನ್ ಶೈಲಿಯನ್ನು ಹೋಲುತ್ತದೆ.

**೨. ಶಿವಶರಣೆ:**

ಬಲಗೈಯಲ್ಲಿ ತಂಬೂರಿಯನ್ನು ಹಿಡಿದುಕೊಂಡು ಎಡಗೈಯಲ್ಲಿ ರುದ್ರಾಕ್ಷಿ ಮಾಲೆಯನ್ನು ಹಿಡಿದುಕೊಂಡು ನಿಂತಿರುವ ಶಿವ ಶರಣೆಯ ಈ ಚಿತ್ರವು ಸ್ಥಳೀಯ ಅಂಶಗಳೊಂದಿಗೆ ರಚನೆಗೊಂಡ ಕಲಾಕೃತಿಯಾಗಿದೆ. ಈ ಕಲಾಕೃತಿಯಲ್ಲಿ ನಕ್ಷೆಯುಳ್ಳ ಕಪ್ಪಾದ ಸೀರೆಯನ್ನು ಉಟ್ಟಿದ್ದು, ತಲೆಯ ಮೇಲೆ ಸೆರಗನ್ನು ಹೊತ್ತುಕೊಂಡು ಭಕ್ತಿಯೊಂದಿಗೆ ತಂಬೂರಿಯ ನಾದದಲ್ಲಿ ತಲ್ಲೀನನಾದಂತೆ ಕಾಣುತ್ತಿರುವ ಮುಖಭಾವ ಹಳದಿ ವರ್ಣದ ರವಿಕೆಯುಟ್ಟಿದ್ದು ಬಳೆಗಳು, ಮೂಗುತಿ, ಕೊರಳಲ್ಲಿ ಆಭರಣಗಳನ್ನು ಹಾಕಿಕೊಂಡಿದ್ದು, ಬಂಗಾರದ ವರ್ಣವನ್ನು ಸೀರೆಯ ಅಂಚು ಮತ್ತು ದಡಿಗೆ ಬಳಸಿದ್ದು ಪಾದದ ಕೆಳಗಡೆ ವೇದಿಕೆಯ ಪಟ್ಟಿ ಇರುವುದು ಕಂಡುಬರುತ್ತದೆ. ಇಲ್ಲಿಯೂ ಸಹ ರಜಪೂತ ಶೈಲಿಯ ಪ್ರಭಾವವಿರುವುದು ಕಂಡುಬರುತ್ತದೆ.

**೩. ವಿಷ್ಣುವಿನಭಕ್ತ:**

ಈ ಕಲಾಕೃತಿಯು ದಖ್ಖನ್‌ದ ಜನಪದ ಕಲೆಯನ್ನು ಪ್ರತಿಬಿಂಬಿಸುತ್ತಿದ್ದು, ಇದೊಂದು ಸಂತನ ಚಿತ್ರವಾಗಿದ್ದು, ತಂಬೂರಿಯುನ್ನು ಎರಡೂ ಕೈಗಳಲ್ಲಿ ಹಿಡಿದುಕೊಂಡಿದ್ದು, ಮೇಲುಡುಗೆ ಕಂಡುಬರುವುದಿಲ್ಲವಾದರೂ ದುಪ್ಪಟ್ಟಿಯನ್ನು ಭುಜದ ಮೇಲೆ ಹಾಕಿಕೊಂಡಿದ್ದು, ಕೆಳಗಡೆ ಧೋತ್ರವನ್ನು ಉಟ್ಟುಕೊಂಡಿರುವನು. ಹಳದಿ ಮಿಶ್ರಿತ ಬಿಳಿಯ ವರ್ಣದಲ್ಲಿರುವ ಬಟ್ಟೆ ಈ ಬಟ್ಟೆಯಲ್ಲಿ ನೀರಿಗೆಗಳಾಗಿ ಬಳಸಿದ ರೇಖೆಗಳು. ಅಷ್ಟೊಂದು ಪ್ರಮಾಣಬದ್ಧವಲ್ಲದ ಈ ಚಿತ್ರ ಮುಖದಲ್ಲಿ ಸಂತನ ಭಾವನೆಗಳನ್ನು ಸಮರ್ಥವಾಗಿ ಹೊರಹೊಮ್ಮಿಸಿದ ಕಲಾವಿದನು. ತಲೆಗೂದಲನ್ನು ಮೇಲ್ಗಡೆ ಬನ್ ಆಕಾರದಲ್ಲಿ ಕಟ್ಟಿಕೊಂಡಿದ್ದು, ದಾಡಿ, ಮೀಸೆಗಳನ್ನು ಹೊಂದಿದ್ದು, ಹಣೆಯಲ್ಲಿ ಉದ್ದನೆಯ ನಾಮ ಕುಂಕುಮವಿಟ್ಟುಕೊಂಡಿರುವುದು ವೈಷ್ಣವ ಭಕ್ತನೆಂಬುದು ತಿಳಿದು ಬರುತ್ತದೆ.

**೪. ಸಿಖ್ಖರ ಗುರು:**

ಸಿಖ್ಖ ಧರ್ಮದ ಗುರುವಿನಂತೆ ಕಂಡುಬರುವ ಈ ಸಂತ ಜನಪದ ದಖ್ಖನ್ ಶೈಲಿಯಲ್ಲಿ ರೂಪುಗೊಂಡಿದೆ. ಹಳದಿ ಮಿಶ್ರಿತ ಬಿಳಿಯ ಪಂಜಾಬಿ ಉಡುಗೆಯನ್ನು ತೊಟ್ಟಿದ್ದು, ಹಸಿರು ವರ್ಣದ ದುಪ್ಪಟ್ಟಾವನ್ನು ಎರಡೂ ಭುಜ ಮತ್ತು ಎದೆಯ ಮೇಲ್ಗಡೆ ಹಾಕಿಕೊಂಡಿರುವನು. ತಲೆಯ ಮೇಲ್ಗಡೆ

ಸಿಂಬೆಯಾಕಾರದ ಟೊಪ್ಪಿಗೆಯನ್ನು ಹಾಕಿಕೊಂಡಿದ್ದು ಬಲಗೈಯಲ್ಲಿ ಶಿಖ್ ಗುರುಗಳು ಹಿಡಿದುಕೊಂಡಿರುವ ಪಾತ್ರೆ, ಎಡಗೈಯಲ್ಲಿ ಏನನ್ನೋ ಹಿಡಿದುಕೊಂಡಂತೆ ಕಂಡುಬರುತ್ತಿದ್ದು, ದಾಡಿ ಮತ್ತು ಮೀಸೆಯನ್ನು ಬಿಟ್ಟಿದ್ದು, ಎದುರುಗಡೆ ನೋಡುತ್ತಿರುವ ದೃಶ್ಯವಿದೆ. ಹಿನ್ನೆಲೆಯಾಗಿ ಕೆಂಪುವರ್ಣವನ್ನು ಬಳಿಯಲಾಗಿದೆ. ಇದು ದಖ್ಖನ್ ಶೈಲಿಯ ಜನಪದ ಹಿನ್ನೆಲೆಯಲ್ಲಿ ರೂಪುಗೊಂಡಿರುವುದು ಕಂಡುಬರುತ್ತದೆ.

**೫. ಗೋಪಾಲನೊಂದಿಗೆ ರಾಧೆ ರುಕ್ಮಿಣಿಯರು:**

ಈ ದೃಶ್ಯವು ಪ್ರಮುಖ ಮಾಡಿನ ಮೇಲ್ಗಡೆಯಲ್ಲಿ ಅಡ್ಡ ಮಾಡು ೭"x೨೨" ಇಂಚುಗಳಲ್ಲಿ ರಚನೆಗೊಂಡಿದ್ದು, ಶ್ರೀಕೃಷ್ಣನು ಕೊಳಲನ್ನು ನುಡಿಸುತ್ತಿದ್ದು ಈ ಇಂಪಾದ ನುಡಿಯನ್ನು ಕೇಳಿ ಅವನತ್ತಲೇ ನೋಡುತ್ತ ಬರುವ ಗೋವುಗಳು ಹಾಗೂ ರಾಧೆ ರುಕ್ಮಿಣಿಯರು ಕೊಡ ಹೊತ್ತುಕೊಂಡು ಕೃಷ್ಣನ ಎಡಬಲಗಳಲ್ಲಿ ಮುರುಳಿಯ ನಾದವನ್ನು ಆಸ್ವಾದಿಸುವಂತೆ ನಿಂತಿರುವರು. ಈ ದೃಶ್ಯಕ್ಕೆ ಹಿನ್ನೆಲೆಯಾಗಿ ಕೆಂಪುವರ್ಣವನ್ನು ಬಳಸಲಾಗಿದೆ.

**೬. ಧ್ಯಾನಾಸಕ್ತಳಾದ ಪಾರ್ವತಿ:**

ಈ ಚಿತ್ರದಲ್ಲಿ ಆರು ಕೈಗಳನ್ನು ಹೊಂದಿದ ಪಾರ್ವತಿ ದೇವಿಯು ಧ್ಯಾನಾಸಕ್ತಳಾಗಿ ಹುಲಿಯ ಚರ್ಮದ ಮೇಲೆ ಕುಳಿತುಕೊಂಡಿದ್ದಾಳೆ. ಕೈಗಳಲ್ಲಿ ಆಯುಧಗಳಿದ್ದು, ಶಂಖ, ಢಮರು, ತ್ರಿಶೂಲ, ಕೊಡ್ಲಿಯಂತಹ ಆಯುಧಗಳಿದ್ದು, ಮುಂದಿನ ಬಲಗೈಯಲ್ಲಿ ರುದ್ರಾಕ್ಷಿ ಮಾಲೆ ಎಡಗೈಯಲ್ಲಿ ಲಿಂಗವಿದ್ದು ಕಂಡುಬರುತ್ತದೆ. ಈ ದೇವಿಯ ಎಡಬಲಗಳಲ್ಲಿ ಬ್ರಾಹ್ಮಣರು ಪೂಜೆಯಲ್ಲಿ ನಿರತರಾಗಿರುವರು. ಈ ದೃಶ್ಯವನ್ನು ೭x೨೨" ಇಂಚುಗಳಲ್ಲಿ ರೂಪುಗೊಳಿಸಿದ್ದು, ಅಡ್ಡಮಾಡಿನಲ್ಲಿದೆ.

**III. (ಕ) ದೇವಾಲಯಗಳು:**

ಶಿವಮಂದಿರ, ಮಾರುತಿ ಮಂದಿರ ಮತ್ತು ಶ್ರೀ ಸಿದ್ಧೋಜಿರಾವ್ ನಿಂಬಾಳಕರ್ ಅವರ ಕುಲದೇವತೆಯಾದ ತುಳಜಾಭವಾನಿಯ ದೇವಸ್ಥಾನವನ್ನು ಕಟ್ಟಿಸಿದ್ದು ಚಿತ್ರಗಳಲ್ಲಿಯೂ ಮೂಡಿಬಂದಿವೆ.

**೧. ಶಿವ ದೇವಾಲಯ :**

ಈ ದೇವಾಲಯವು ಆಯತಾಕರದ ಮಂಟಪ ಹೊಂದಿದ್ದು, ಮಧ್ಯದಲ್ಲಿ ಗರ್ಭಗುಡಿಯ ಬಾಗಿಲು ಒಂದಿದ್ದು, ಒಳಗಡೆ ಈಶ್ವರನ ಪ್ರತಿರೂಪವಾಗಿರುವ ಲಿಂಗವಿದೆ. ಈ ಗರ್ಭಗುಡಿಯ ಮೇಲ್ಗಡೆಯಲ್ಲಿ ಮೆಟ್ಟಿಲುಗಳಾಗಿ ಕಿರಿದಾಗುತ್ತ ಹೋಗಿ ಅದರ ಮೇಲೆ ಗೋಲಾಕಾರದ ಕಳಸವಿದೆ. ಈ ಶೈವ ದೇವಾಲಯವನ್ನು ಕೆಂಪು, ಹಳದಿ, ಕಪ್ಪು ವರ್ಣದಲ್ಲಿದ್ದು, ಬಂಗಾರ ವರ್ಣದ ಕಳಸವನ್ನು ತೋರಿಸಿರುವರು.

**೨. ಆಂಜನೇಯ ದೇವಸ್ಥಾನ:**

ಈ ದೇವಾಲಯ ಚೌರಸ ಆಕಾರದ ಗರ್ಭಗುಡಿಯನ್ನು ಹೊಂದಿದ್ದು, ವಿಶೇಷವಾದ ಮೆಟ್ಟಿಲುಗಳಾಗಿ ಶಿವಾಲಯಕ್ಕಿಂತಲೂ ಭಿನ್ನವಾಗಿದ್ದು ಒಂದೊಂದು ಮೆಟ್ಟಿಲಕ್ಕೂ ಮಾಡುಗಳನ್ನು ಪಟ್ಟಿಕೆಗಳನ್ನು ಮಾಡಿಕೊಳ್ಳುತ್ತ ಮೇಲೆ ಹೋಗಿ ಗೋಲಾಕಾರದ ಕಳಶವನ್ನು ಇಡಲಾಗಿದೆ. ಈ ದೇವಾಲಯಕ್ಕೆ ಒಂದೇ ಬಾಗಿಲು ಇದ್ದು, ಕೆಂಪು ಹಿನ್ನೆಲೆಯಲ್ಲಿ ಹಳದಿವರ್ಣದ ಆಂಜನೇಯನ ಮೂರ್ತಿಯನ್ನು ರಚಿಸಲಾಗಿದೆ. ಈ ದೇವಾಲಯದ ಬಲಭಾಗದಲ್ಲಿ ಭಕ್ತನೊಬ್ಬ ನಮಸ್ಕರಿಸುತ್ತಿರುವನು.

**೩. ತುಳುಜಾಭವಾನಿ ದೇವಸ್ಥಾನ:**

ಈ ದೇವಾಲಯವು ವಿಭಿನ್ನವಾಗಿಯೂ ವಿಶಿಷ್ಠವಾಗಿಯೂ ರೂಪುಗೊಂಡಿದ್ದು, ನಿಪ್ಪಾಣಿ ಸಂಸ್ಥಾನದ ಕುಲದೇವತೆಯ ಮಂದಿರವಾಗಿದ್ದು, ಸುಂದರವಾಗಿ ಭವ್ಯವಾಗಿ ಚಿತ್ರಿಸಲಾಗಿದೆ. ಇದೂ ಕೂಡಾ ಚೌರಸ ಆಕಾರದಲ್ಲಿ ಗರ್ಭಗುಡಿ ಇದ್ದು, ಈ ಗುಡಿಯು ಏಳು ಕಳಸವನ್ನು ಹೊಂದಿದ್ದು, ಏಳು ಗೋಪುರಗಳನ್ನು ನಿರ್ಮಿಸಲಾಗಿದೆ. ಈ ಗುಡಿಯ ಕಂಬಗಳು ವಿವಿಧ ವಿನ್ಯಾಸಗಳೊಂದಿಗೆ ಸುಂದರವಾಗಿ ಚಿತ್ರಿಸಿದ್ದು, ತುಳುಜಾಭವಾನಿಯ ಮೂರ್ತಿಯೂ ಅತ್ಯಂತ ಸುಂದರವಾಗಿ ಲಕ್ಷಣವಾಗಿ ಮೂಡಿಬಂದಿದೆ. ಗುಡಿಯ ಮುಂಭಾಗದಲ್ಲಿರುವ ಪೂಜಾರಿ ಪೂಜಿಸುತ್ತಿರುವ ದೃಶ್ಯ ಕಂಡುಬರುತ್ತದೆ. ಈ ಎಲ್ಲ ದೇವಾಲಯಗಳಲ್ಲಿಯೇ ತುಳುಜಾಭವಾನಿಯ ದೇವಸ್ಥಾನವು ವಿಶಿಷ್ಠವಾಗಿ ರಚನೆಗೊಂಡಿದೆ.

**೪. ಶ್ರೀಕೃಷ್ಣ ಸತ್ಯಭಾಮೆಯರ ಸಂಭಾಷಣೆ:**

ಪಾರಿಜಾತ ಹೂವು ಬೇಕೆಂದು ಹಠಮಾಡುತ್ತಿರುವ ಸತ್ಯಭಾಮೆ ಶ್ರೀಕೃಷ್ಣನೊಂದಿಗೆ ವಾಗ್ವಾದಕ್ಕೆ ಇಳಿಯುತ್ತಾಳೆ. ಆಗ ಶ್ರೀಕೃಷ್ಣನು ಸತ್ಯಭಾಮೆಯನ್ನು ಸಮಾಧಾನಪಡಿಸುತ್ತಿರುವ ದೃಶ್ಯ ಇದಾಗಿದ್ದು, ಕಟ್ಟಿಗೆಯ ಮಂಟಪವೊಂದರಲ್ಲಿ ಎದುರು ಬದಿರಾಗಿ ಕುಳಿತುಕೊಂಡಿದ್ದು ಕೃಷ್ಣನು ಕಿರೀಟ ಧಾರಿಯಾಗಿದ್ದು, ಕೇಸರಿವರ್ಣದ ದುಪ್ಪಟ್ಟಾ ಭುಜದ ಮೇಲೆ ಹಾಕಿಕೊಂಡಿದ್ದು, ಹಳದಿವರ್ಣದ ಧೋತ್ರವನ್ನು ಉಟ್ಟುಕೊಂಡಿರುವನು. ಬಟ್ಟೆಯ ಅಂಚು, ದಡಿ, ಆಭರಣಗಳೆಲ್ಲ ಬಂಗಾರದ ವರ್ಣದಲ್ಲಿವೆ. ಎದುರಾಗಿ ಕುಳಿತಿರುವ ಸತ್ಯಭಾಮೆ ಕೆಂಪು ಸೀರೆಯನ್ನು ಹಾಗೂ ಹಳದಿ ವರ್ಣದ ರವಿಕೆಯನ್ನುಟ್ಟುಕೊಂಡಿದ್ದು, ಸೀರೆಯಲ್ಲಿಯ ನಕ್ಷೆಗಳು ಅಂಚು, ದಡಿ, ಆಭರಣಗಳೆಲ್ಲ ಬಂಗಾರದ ವರ್ಣಗಳಿಂದ ಅಲಂಕರಿಸಲಾಗಿದೆ. ಕಂದುಗೆಂಪು ವರ್ಣದಲ್ಲಿದ್ದು ನೆಲಹಾಸು ಕಪ್ಪುವರ್ಣದಲ್ಲಿದೆ. ಈ ಒಟ್ಟು ಚಿತ್ರವು ಅಲಂಕಾರಿಕವಾಗಿ ಮೂಡಿಬಂದಿದೆ. ಈ ಚಿತ್ರವನ್ನು ೮x೮" ಇಂಚುಗಳುಳ್ಳ ಚಿಕ್ಕ ಮಾಡಿನಲ್ಲಿ ರಚಿಸಿದ್ದಾರೆ.

**೫. ಶಿವಪಾರ್ವತಿಯರ ಚಿತ್ರ:**

ಶಿವನು ತನ್ನ ತೊಡೆಯ ಮೇಲೆ ಪಾರ್ವತಿಯನ್ನು ಕುಳ್ಳಿರಿಸಿಕೊಂಡು ಯೋಗದಲ್ಲಿ ತೊಡಗಿದ್ದಾನೆ. ಇಲ್ಲಿ ಪಾರ್ವತಿಯ ಚಿತ್ರ ಅತ್ಯಂತ ಚಿಕ್ಕದಾಗಿದ್ದು, ಶಿವನ ಬಲತೊಡೆಯ ಮೇಲೆ ಕುಳಿತಿದ್ದಾಳೆ. ಶಿವನು ಒಂದು ಪೀಠದ ಮೇಲೆ ಕುಳಿತಿದ್ದು, ಮುಂದೆ ಸ್ವಲ್ಪ ದೂರದಲ್ಲಿ ನಂದಿಯು ಮಲಗಿಕೊಂಡಿದೆ. ನಂದಿಯ ಮೈಮೇಲೆ ಅಲಂಕಾರಿಕವಸ್ತುವನ್ನು ಹಾಕಲಾಗಿದ್ದು, ಪಾರ್ವತಿಯು ಕೆಂಪುಸೀರೆ ಉಟ್ಟುಕೊಂಡಿದ್ದಾಳೆ. ಜಟಾಧಾರಿ ಶಿವನು ಕಮಲದ ಹೂವಿನ ಮೇಲೆ ಕುಳಿತಿರುವನು. ಇದೊಂದು ಜಾನಪದ ದಖ್ಖನ್ ಶೈಲಿಯನ್ನು ಪ್ರತಿನಿಧಿಸುವಂತಿದೆ. ಈ ಚಿತ್ರವನ್ನು ೭x೨೨" ಇಂಚುಗಳಲ್ಲಿ ಚಿತ್ರಿಸಲಾಗಿದೆ.

**೬. ಮಹಿಷಾಸುರ ಮರ್ಧಿನಿ:**

ಶ್ರೀ ಚಾಮುಂಡೇಶ್ವರಿಯು ಮಹಿಷಾಸುರನನ್ನು ಕೊಲ್ಲುತ್ತಿರುವ ದೃಶ್ಯವಾಗಿದೆ. ಎಂಟು ಕೈಗಳನ್ನು ಹೊಂದಿದ ದೇವಿಯು ಪ್ರತಿಯೊಂದು ಕೈಯಲ್ಲಿ ತ್ರಿಶೂಲ, ಢಮರುಗ, ಖಡ್ಗ, ಗುರಾಣಿ, ಬಿಲ್ಲು-ಬಾಣ, ಶಂಖ, ಚಕ್ರ, ಕೊಡ್ಲಿ ಮುಂತಾದ ಆಯುಧಗಳನ್ನು ಹಿಡಿದುಕೊಂಡು ಮಹಿಷಾಸೂರ ರಾಕ್ಷಸನು ಕೋಣದ ರೂಪದಲ್ಲಿದ್ದು, ಆ ಕೋಣದ ರುಂಡವನ್ನು ಕಡಿದು ಚಲ್ಲಿದ್ದು ಅದರ ಬಾಲವನ್ನು ಹಿಡಿದುಕೊಂಡಿರುವಳು. ಅದರ ಮೇಲ್ಗಡೆ ವಿರಾಟರೂಪವನ್ನು ತೋರಿಸಿದ್ದು, ಇನ್ನೂ ಒಬ್ಬ ರಾಕ್ಷಸನ ಕೂದಲವನ್ನು ಹಿಡಿದು ಚಂಡಾಡಲು ನಿರ್ಧರಿಸಿದಂತಿದೆ. ಬಲಭಾಗದಲ್ಲಿ ಮಹಿಷಾಸುರನ ಪತ್ನಿಯು ಕೈಮುಗಿದು ದೇವಿಯನ್ನು ಪ್ರಾರ್ಥಿಸುತ್ತಿದ್ದು, ಈ ಚಿತ್ರದ ಮುಂದುಗಡೆಯ ಬಲ ಮತ್ತು ಎಡಭಾಗದಲ್ಲಿ ಸ್ತ್ರೀಯರು ಹೂವಿನ ಮಾಲೆಗಳನ್ನು ಹಿಡಿದು ದೇವಿಯತ್ತ ಬರುತ್ತಿದ್ದಾರೆ. ಈ ಚಿತ್ರದಲ್ಲಿಯ ಬಣ್ಣಗಳೆಲ್ಲ ಮಾಸಿಹೋಗಿದ್ದು, ಬೂದುಬಣ್ಣಕ್ಕೆ ತಿರುಗಿದೆ. ಕಪ್ಪು ಮತ್ತು ಕೆಂಪುಬಣ್ಣಗಳು ಮಾತ್ರ ಕಾಣಿಸಿಕೊಳ್ಳುತ್ತಿವೆ. ಈ ಕಲಾಕೃತಿಯೂ ಕೂಡಾ ದಖ್ಖನ್ ಪ್ರಭಾವದೊಂದಿಗೆ ಜಾನಪದ ಚಿತ್ರವಾಗಿಯೇ ಮೂಡಿಬಂದಿದೆ. ಈ ಚಿತ್ರವನ್ನು ೮x೮" ಇಂಚುಗಳುಳ್ಳ ಚಿಕ್ಕ ಮಾಡಿನಲ್ಲಿ ರಚನೆಗೊಂಡಿದೆ.

ಈ ಮೇಲಿನ ಸರಣಿ ಚಿತ್ರಗಳಲ್ಲಿ ಶಿವಮಂದಿರ, ಮಾರುತಿ ಮಂದಿರ, ತುಳುಜಾಭವಾನಿ ಮಂದಿರ, ಶ್ರೀಕೃಷ್ಣ ಸತ್ಯಭಾಮೆಯರು, ಶಿವಪಾರ್ವತಿ, ಮಹಿಷಾಸುರ ಮರ್ಧಿನಿಯರ ಚಿತ್ರಗಳನ್ನು ರಚಿಸಿದ್ದು, ವಾಸ್ತುವಿನ ಯಥಾದರ್ಶನದ Front Elvation ಬಳಕೆ ಉತ್ತಮವಾಗಿ ಮೂಡಿಬಂದಿದ್ದು, ಗುಡಿಯಲ್ಲಿಯ ದೇವತೆಗಳು ಕಾಣುವಂತೆ ಚಿತ್ರಿಸಲಾಗಿದೆ. ಆಕೃತಿಗಳು ಜಾನಪದೀಯ ಅಂಶಗಳನ್ನೇ ಹೊಂದಿವೆ. ಈ ಕೃತಿಗಳೆಲ್ಲ ಸ್ಥಳೀಯ ಪ್ರಭಾವದಿಂದ ಕಂಗೊಳಿಸುತ್ತಿವೆ.

**IV. ಹೂದಾನಿಯೊಂದಿಗೆ ಹಂಸಪಕ್ಷಿಗಳು:**

ಈ ಕಲಾಕೃತಿಯನ್ನು ದೊಡ್ಡದಾದ ಮಾಡಿನಲ್ಲಿ ३೪"x೨೨" ಇಂಚು ಅಳತೆಯಲ್ಲಿ ಈ ಸಂಯೋಜನೆಯನ್ನು ಮಾಡಲಾಗಿದೆ. ಈ ಮಾಡಿನ ಕೆಳಗಡೆಯ ಮಧ್ಯದಲ್ಲಿ ಹೂದಾನಿ ಇದ್ದು, ಕೇಸರಿ

ವರ್ಣದಲ್ಲಿ ಮಾಡಲಾಗಿದ್ದು ಜಾಳಿಗೆಯ ಆಕಾರದಲ್ಲಿ ಕಪ್ಪು ವರ್ಣದಿಂದ ರೇಖೆಗಳನ್ನು ಎಳೆಯಲಾಗಿದೆ. ಈ ಹೂಧಾನಿಯ ಎಡಬಲಗಳಲ್ಲಿ ಹಂಸಪಕ್ಷಿಗಳು ಹೂದಾನಿಯತ್ತ ಮುಖಮಾಡಿಕೊಂಡು ನಿಂತು ನೋಡುತ್ತಿವೆ. ಮೇಲ್ಗಡೆಯ ಮಾಡಿನ ತುಂಬಾ ಎಲೆ, ದೇಟು, ಹೂವುಗಳಿಂದ ತುಂಬಿಕೊಂಡಿದೆ ವಿವಿಧ ರೀತಿಯ ಎಲೆ ಮತ್ತು ಹೂವುಗಳು ತುಂಬಾ ಆಕರ್ಷಕವಾಗಿ ಮೂಡಿಬಂದಿವೆ. ಆದರೆ ಈಗ ಬಹಳಷ್ಟು ವರ್ಣಗಳು ಕೆಲವೊಂದು ಕಡೆ ತೊಳೆದುಕೊಂಡು ಹೋಗಿದ್ದರೆ ಇನ್ನೂ ಕೆಲವು ಕಡೆಯಲ್ಲಿ ಸುಣ್ಣವನ್ನು ಮೇಲ್ಗಡೆ ಹಚ್ಚಿರುವರು. ಹಳದಿ, ಕೇಸರಿ, ಹಸಿರು, ನೀಲಿ ವರ್ಣಗಳನ್ನು ಬಳಸಿದ್ದು ಕಂಡುಬರುತ್ತದೆಯಾದರೂ ಯಾವುದೇ ವರ್ಣವೂ ಸ್ಪಷ್ಟವಾಗಿ ಕಾಣುತ್ತಿಲ್ಲ ಕೆಂಪುವರ್ಣದ ಹಿನ್ನೆಲೆಯನ್ನು ಹೊಂದಿದೆ. ಹೂದಾನಿಯ ಪಕ್ಕದಲ್ಲಿರುವ ಹಂಸಗಳನ್ನು ಹಳದಿವರ್ಣದಲ್ಲಿಯೇ ಮಾಡಲಾಗಿದೆ. ಹೀಗೆ ಅಲಂಕಾರಯುಕ್ತವಾಗಿ ರಚಿಸಲಾಗಿದೆ.

**೨. ಅಂತಃಪುರದಲ್ಲಿ ರಾಜಕುಮಾರಿ ಮತ್ತು ಮಗು :**

ಪ್ರಮುಖ ಮಾಡಿನ ಎಡಗಡೆಯಲ್ಲಿಯ ಚಿಕ್ಕಮಾಡಿನಲ್ಲಿ ೫"x೭" ಇಂಚುಗಳುಳ್ಳ ಭಿತ್ತಿ ಚಿತ್ರ ಇದಾಗಿದೆ. ಈ ಕಲಾಕೃತಿಯಲ್ಲಿ ಅಂತಃಪುರವನ್ನು ತೋರಿಸಿದ್ದು. ತೊಟ್ಟಿಲಾಕಾರದ ಮಂಟಪವೊಂದರಲ್ಲಿ ನಕ್ಷೆಗಳುಳ್ಳ ನೆಲಹಾಸಿನ ಮೇಲೆ ಆಸೀನಳಾದ ರಾಜಕುಮಾರಿಯು. ಕೆಂಪು ಸೀರೆಯನ್ನುಟ್ಟಿದ್ದು ಕಪ್ಪು ಕುಪ್ಪಸತೊಟ್ಟಿರುವಳು. ಬಲಗೈಯಿಂದ ತನ್ನ ಮಗುವನ್ನು ಕರೆಯುತ್ತಿದ್ದು. ಮಗುವು ತಾಯಿಯತ್ತ ಹಿಂದುಗಡೆ ಇರುವ ದಿಂಬಿಗೆ ಆಸೀನಳಾಗಿರುವ ರಾಣಿಯ ಹತ್ತಿರ ಬರುತ್ತಿದೆ. ಮಗುವಿನ ಮೈಮೇಲೆ ಬಟ್ಟೆ ಇಲ್ಲದೇ ಬರೀ ಮೈಯಿಂದಲೇ ಇರುವುದು ಕಂಡು ಬರುತ್ತದೆ. ಎಡಗಡೆಯಲ್ಲಿ ನಿಂತಿರುವ ದಾಸಿಯು ರಾಣಿಯೊಂದಿಗೆ ಮಾತನಾಡುತ್ತಲಿದ್ದು ದಾಸಿಯ ಕಪ್ಪು ಸೀರೆಯಲ್ಲಿ ಚುಕ್ಕೆಯಾಕಾರದ ನಕ್ಷೆಗಳನ್ನು ಹೊಂದಿದ್ದು. ಮಗುವಿಗೆ ಆಹಾರವನ್ನು ತಟ್ಟೆಯಲ್ಲಿಟ್ಟುಕೊಂಡು ಎರಡೂ ಕೈಗಳಲ್ಲಿ ಹಿಡಿದುಕೊಂಡು ಬರುತ್ತಿರುವಳು ಈ ಅಂತಃಪುರದಲ್ಲಿರುವ ದೃಶ್ಯವನ್ನು ಸುಂದರವಾಗಿ ಚಿತ್ರಿಸಿದ್ದು ಕೆಂಪು ಹಿನ್ನೆಲೆಯನ್ನು ಹೊಂದಿದೆ.

**೩. ಸುರಪಾನ ಪ್ರಿಯ ಅರಸ :**

ಸಿಂಹಾಸನದಲ್ಲಿ ಆಸೀನನಾಗಿರುವ ರಾಜಕುಮಾರನು ಕೆಂಪು ಮಿಶ್ರಿತ ಹಳದಿ ವರ್ಣದ ಧೋತ್ರವನ್ನು ಉಟ್ಟುಕೊಂಡಿದ್ದು ಅದರಲ್ಲಿ ಕೆಂಪು ವರ್ಣದ ನಕ್ಷೆಗಳಿವೆ ಮೇಲ್ಗಡೆ ಬರೀ ಮೈಯಲ್ಲಿದ್ದು ಕೆಂಪು ವರ್ಣದ ದುಪ್ಪಟ್ಟಾ ಬುಜದ ಮೆಲೆ ಹಾಕಿಕೊಂಡಿರುವನು ಇದರ ಅಂಚು ಮತ್ತು ದಡಿಗಳು ಬಂಗಾರವರ್ಣದಲ್ಲಿವೆ. ಕೊರಳಲ್ಲಿ ರತ್ನದ ಮಾಲೆಯನ್ನು ಹಾಕಿಕೊಂಡಿದ್ದು ತಲೆಯ ಮೇಲೆ ಕಿರೀಟವಿದೆ. ಎದುರಿನಲ್ಲಿರುವ ಸಖಿಯರಿಗೆ ಏನನ್ನೋ ಆಜ್ಞೆಯನ್ನು ಮಾಡುತ್ತಿರುವಂತಿದೆ ಎದುರಿನಲ್ಲಿರುವ ಸಖಿಯು ಹಸಿರು ಸೀರೆಯನ್ನುಟ್ಟಿದ್ದು ಕೆಂಪು ಕುಪ್ಪಸತೊಟ್ಟು ಕೊಂಡಿರುವಳು ಕೊರಳಲ್ಲಿ ಆಭರಣಗಳನ್ನು ಹಾಕಿಕೊಂಡಿದ್ದು

ಬಲಗೈಯಲ್ಲಿ ನೀರಿನ ಹೂಜಿಯೊಂದನ್ನು ಹಿಡಿದುಕೊಂಡಿದ್ದು ಎಡಗೈಯಲ್ಲಿ ಪಾನೀಯ ಸ್ವೀಕರಿಸುವ ಪಾತ್ರೆಯನ್ನು ರಾಜನಿಗೆ ನೀಡುತ್ತಿದ್ದುದು ಕಂಡು ಬರುತ್ತದೆ. ಇವಳ ಹಿಂದುಗಡೆ ಇನ್ನೊಬ್ಬ ಸಖಿ ನಿಂತು ಕೊಂಡಿದ್ದು ಕೆಂಪು ಸೀರೆಯನ್ನುಟ್ಟುಕೊಂಡಿದ್ದು ಹಳದಿವರ್ಣದ ಚುಕ್ಕೆಗಳನ್ನು ಚಿತ್ರಿಸಲಾಗಿದೆ ಕಪ್ಪು ವರ್ಣದ ಕುಪ್ಪುಸ ತೊಟ್ಟುಕೊಂಡಿದ್ದು ಬಲಗೈಯಿಂದ ಮುಂದಿರುವ ಸಖಿಯ ರಟ್ಟೆಯನ್ನು ಹಿಡಿದುಕೊಂಡಿದ್ದು ಎಡಗೈಯಲ್ಲಿ ಸುರಪಾನೀಯ ತುಂಬಿದ ಚೀಲವನ್ನು ಹಿಡಿದುಕೊಂಡಿರುವಳು ರಾಜನನ್ನು ತದೇಕಚಿತ್ತದಿಂದ ನೋಡುತ್ತಾ ನಿಂತಿರುವ ದೃಶ್ಯವಿದೆ. ನೋಡುಗರ ಎದುರಿನಲ್ಲಿ ಚೌರಸ ಆಕಾರದ ಪಟ್ಟಿಕೆಗಳಿದ್ದು ಮಧ್ಯದ ಪಟ್ಟಿಕೆಯಲ್ಲಿ ಕಾರಂಜಿಯನ್ನು ಮಾಡಿದ್ದು. ಬದಿಯಲ್ಲಿರುವ ಪಟ್ಟಿಕೆಯಲ್ಲಿ ಕೆಂಪು ಹೂವಿನ ಹಸಿರು ಎಲೆಗಳಿಂದ ತುಂಬಿಕೊಂಡಿದೆ ಈ ಕಲಾಕೃತಿಯನ್ನು ೫"x೭" ಇಂಚುಗಳಲ್ಲಿ ರಚಿಸಲಾಗಿದೆ.

**೪. ರುಕ್ಮಿಣಿಗೆ ಪಾರಿಜಾತ ಪುಷ್ಪ ನೀಡುತ್ತಿರುವ ಕೃಷ್ಣ :**

ಪಾರಿಜಾತ ಪುಷ್ಪದ ಕುರಿತು ಕೃಷ್ಣ ಮತ್ತು ರಾಧೆಯರ ನಡುವೆ ತೀವ್ರವಾದ ಕದನವೇ ನಡೆದಿದ್ದು ಸಂಪೂರ್ಣ ಕಥೆಯ ಚಿತ್ರಗಳು ನಿಪ್ಪಾಣಿ ವಾಡೆಯ ಭಿತ್ತಿಗಳಲ್ಲಿ ಕಂಡು ಬರುತ್ತಿದ್ದು ಈ ವಿಷಯಕ್ಕೆ ಸಂಬಂಧ ಪಟ್ಟಂತೆ ಕಲವೇ ಕೆಲವು ಚಿತ್ರಗಳು ಈಗ ಉಳಿದು ಕೊಂಡಿವೆ ಉತ್ತರ ಕರ್ನಟಕದಲ್ಲಿ ಆಗಿನಿಂದಲೂ ಈತನಕ ಶ್ರೀ ಕೃಷ್ಣ ಪಾರಿಜಾತದ ಕಥೆ, ನಾಟಕಗಳು ಜನಪ್ರಿಯವಾಗಿವೆ ಅಂತೆಯೇ ಈ ಭಿತ್ತಿಚಿತ್ರದಲ್ಲಿ ಒಂದು ಸನ್ನಿವೇಶವಿದೆ. ಶ್ರೀ ಕೃಷ್ಣನು ಪಾರಿಜಾತದ ಪುಷ್ಪವನ್ನು ರುಕ್ಮಿಣಿಗೆ ನೀಡುತ್ತಿದ್ದು ರಾಧೆಯು ಹಿಂದ ನಿಂತುಕೊಂಡು ಬೆರಗಾಗಿ ನೋಡುತ್ತಿದ್ದಾಳೆ ಶ್ರೀಕೃಷ್ಣ ರುಕ್ಮಿಣಿಯರು ಕಟ್ಟಿಗೆಯ ತೊಟ್ಟಿಲಂತಹ ವೇದಿಕೆಯ ಮೇಲೆ ಕುಳಿತಿದ್ದು. ಶ್ರೀಕೃಷ್ಣನು ಹಳದಿವರ್ಣ ಧೋತ್ರ ಕೆಂಪು ಮಿಶ್ರಿತ ಹಳದಿ ವರ್ಣದ ಅಂಗಿಯನ್ನು ತೊಟ್ಟು ಕೊಂಡು ಎಡಗಡೆಯ ಬುಜದ ಮೇಲಿರುವ ದುಪ್ಪಟ್ಟಾ ಕೆಂಪು ವರ್ಣದಲ್ಲಿದೆ. ಎದುರಿನಲ್ಲಿರುವ ರುಕ್ಮಿಣಿಯ ಸೀರೆಯ ಬಿಳಿ ವರ್ಣದ್ದಾಗಿದ್ದು ಕೆಂಪುವರ್ಣದ ರವಿಕೆಯನ್ನು ತೊಟ್ಟುಕೊಂಡು ಕೃಷ್ಣನು ಕೊಡುತ್ತಿರುವ ಪಾರಿಜಾತ ಪುಷ್ಪವನ್ನು ತಗೆದುಕೊಳ್ಳುತ್ತಿದ್ದಾಳೆ. ಹಿಂದುಗಡೆ ನಿಂತಿರು ರಾಧೆ ಬೆರಗಾಗಿ ನೋಡುತ್ತಿದ್ದು ಹಳದಿ ವರ್ಣದ ಸೀರೆಕೆಂಪು ಚುಕ್ಕೆಗಳ ನಕ್ಷೆಯಿಂದ ಅಲಂಕರಿಸಿದ್ದು ಕಪ್ಪು ವರ್ಣದ ರವಿಕೆಯನ್ನು ತೊಟ್ಟು ಕೊಂಡಿದ್ದು ಬಲಗೈ ಗದ್ದಕ್ಕೆ ಆನಿಸಿಕೊಂಡು ಯೋಚನಾ ಮಗ್ನಳಾದಂತಿದ್ದು ಎಡಗೈಯಲ್ಲಿ ಯಾವುದೋ ವಸ್ತುವನ್ನು ಹಿಡಿದು ನಿಂತುಕೊಂಡಿರುವಳು. ಕೆಳಗಡೆ ನಕ್ಷೆಯಿರುವ ನೆಲಹಾಸು ಕಂಡುಬರುತ್ತದೆ. ಈ ಕಲಾ ಕೃತಿಯು ಈಗ ಅಲ್ಲಲ್ಲಿ ವರ್ಣವು ಉದುರಿ ಹೋಗಿದ್ದು ಇವರು ಕುಳಿತಿರುವ ಮಂಟಪದ ಮುಂದುಗಡೆಯಲ್ಲಿ ಚೌರಸದ ಪಟ್ಟಿಕೆಗಳಿದ್ದು ಅದರಲ್ಲಿ ಗುಲಾಬಿ ಹೂವು ಮತ್ತು ಹಸಿರು ಎಲೆಗಳಿಂದ ತುಂಬಿಕೊಂಡಿದೆ. ಈ ಕಲಾಕೃತಿಯನ್ನು ೫"x೭" ಇಂಚುಗಳಲ್ಲಿ ರಚಿಸಲಾಗಿದೆ.

ಇಲ್ಲಿ ಮಂಟಪಗಳ ವಿನ್ಯಾಸಗಳನ್ನು ಚಿತ್ರರಚನೆಗೆ ರೂಪಿಸಲಾಗಿದೆ. ಕೆಲವು ಚಿತ್ರಗಳಿಗೆ ಮಂಟಪಗಳಂತೆ ವಿನ್ಯಾಸಗಳನ್ನು ಕಲಾವಿದ ಹಿನ್ನೆಲೆಯಾಗಿ ರೂಪಿಸಿಕೊಂಡು ಚಿತ್ರಿಸಿರುವನು. ಇನ್ನೂ ಕೆಲವು ಕಡೆ ಮಾಡುಗಳನ್ನೇ ಸಹಜವಾಗಿ ಮಂಟಪಗಳ ಹಿನ್ನೆಲೆಯಾಗಿ ಬಳಸಿಕೊಂಡಿರುವರು ಚಿತ್ರಗಳಿಗಾಗಿ ಆಯತ, ಚೌಕ, ಕಮನುಗಳು, ತ್ರಿಕೋನಾಕಾರದಂತಹ ಸ್ಥಳವಿನ್ಯಾಸಗಳನ್ನು ಪ್ರತ್ಯೇಕವಾಗಿ ರೂಪಿಸಿಕೊಳ್ಳದೇ ಗೋಡೆಗಳಲ್ಲಿರುವ ಅಂತಹ ವಿನ್ಯಾಸಗಳನ್ನೇ ಇಡಿಯಾಗಿ ಕಲಾಕೃತಿ ರಚಿಸಲು ಬಳಸಿಕೊಳ್ಳಲಾಗಿದೆ ಚಿತ್ರಗಳಲ್ಲಿ ಹೊರಾಂಗಣದ ದೃಶ್ಯಗಳನ್ನು ನಿರೂಪಿಸುವ ಪರಿಪಾಠದಲ್ಲಿ ತೊಡಗಿಕೊಂಡಂತಿದೆ. ಅರಮನೆ, ದೇವಾಲಯ, ಕೋಟೆ ಗುಡ್ಡ, ಬೆಟ್ಟಗಳು ಹೊರಾಂಗಣ ದೃಶ್ಯಗಳು ಇಲ್ಲಿ ಹೆಚ್ಚಾಗಿ ಕಂಡು ಬರುತ್ತವೆ. ಉಜ್ವಲ ವರ್ಣಗಳ ಬಳಕೆಯಾಗಿದ್ದು ಅದರಲ್ಲೂ ಕೆಂಪುವರ್ಣವನ್ನು ಯತೇಚ್ಛವಾಗಿ ಬಳಸಿರುವುದು ಕಂಡು ಬರುತ್ತದೆ.

**II ನೆಯ ವಿಭಾಗ– ಪಹಾರಾಹಾಲ್‌ದಲ್ಲಿಯ ಭಿತ್ತಿಚಿತ್ರಗಳು**

ಪಹಾರಾಹಾಲ್ ಅಂದರೆ ಕಾವಲುಗಾರನ ಕೋಣಿ ಎಂದಾಗುತ್ತಿದ್ದು ಈ ಕೋಣೆಯು ೧೦'x೧೦' ಘೂಟ ಚೌರಸದ ಕೋಣೆಯಾಗಿದ್ದು ಸುಮಾರು ೮' ಘೂಟ ಎತ್ತರವಾಗಿದೆ. ಈ ಕೋಣೆಗೆ ಯಾವುದೇ ಕಿಡಕಿಗಳು ಇಲ್ಲ ಒಂದೇ ಒಂದು ಬಾಗಿಲು ಇದೆ. ಗಾಳಿ ಮತ್ತು ಬೆಳಕಿಗಾಗಿ ಜಂತಿಯಲ್ಲೊಂದು ಬೆಳಕಿಂಡಿ ಇದೆ ಅಷ್ಟೆ ಸುತ್ತಲೂ ನಾಲ್ಕು ಗೋಡೆಗಳಿದ್ದು ನೆಲದಿಂದ ಜಂತಿಯವರೆಗೆ ಚಿತ್ರಗಳನ್ನು ಬಿಡಿಸಲಾಗಿದೆ. ಈ ಭಿತ್ತಿ ಚಿತ್ರಗಳಲ್ಲಿ ಕೃಷ್ಣ ಮತ್ತು ಗೋಪಿಕಾಸ್ತ್ರೀಯರಿಗೆ ಸಂಬಂಧಿಸಿದ ಹಲವಾರು ಚಿತ್ರಗಳು ರೂಪುಗೊಂಡಿವೆ. ಸಮತಟ್ಟಾದ ನಾಲ್ಕೂಗೋಡೆಗಳ ಮೇಲೆ ವಿಶಾಲವಾದ ಭಿತ್ತಿಯನ್ನು ರಚಿಸಿಕೊಂಡು. ಚೌಕಟ್ಟುಗಳನ್ನು ಮಾಡಿಕೊಂಡಿದ್ದು. ಆವುಗಳಲ್ಲಿ ವಿಷಯಾಧಾರಿತ ಚಿತ್ರಗಳನ್ನು ರಚಿಸಿರುವರು. ೫೬"x೩೫" ಇಂಚುಗಳ ಭಿತ್ತಿಯಲ್ಲಿ ಮೂರು ದೊಡ್ಡ ಭಾಗಗಳನ್ನು ಮಾಡಿ, ಮೂರು ಚಿಕ್ಕಬಾಗಗಳನ್ನು ಮಾಡಿ ೭"x೩೧/೨" ಮತ್ತು ೫"x೩೧/₂ ಇಂಚು ಆಳತೆಯ ಎರಡು ರೀತಿಯಲ್ಲಿ ಆಯತಾಕಾರಗಳನ್ನು ಮಾಡಿ ಕೊಂಡಿದ್ದು ಈ ಭಿತ್ತಿಯಲ್ಲಿ ಚಿತ್ರಗಳನ್ನು ರಚಿಸಲಾಗಿದೆ. ಹೀಗೆ "ನಿಪ್ಪಾಣಿ ರಾಜವಾಡೆಯ ಪಹಾರಾಹಾಲ್ ಸ್ವಯಂ ಪೂರ್ಣವಾದ ಚಿತ್ರಶಾಲೆಯಾಗಿದೆ" ಈ ಚಿತ್ರಗಳನ್ನು ಸುಚಿಗೊಳಿಸಿ ಸೂಕ್ತವಾದ ಬೆಳಕನ್ನು ಕಲ್ಪಿಸಿ, ಈ ಕೋಣೆಯನ್ನು ದುರಸ್ತಿಗೊಳಿಸಿ ಕಲಾಕೃತಿಗಳು ಸುರಕ್ಷಿತವಾಗಿರುವಂತೆ ಕಾಯ್ದುಕೊಳ್ಳಬೇಕಾಗಿದ್ದುದು ಹಾಗೂ ಸರಕಾರವು ನಮ್ಮ ನಾಡಿನ ಒಂದು ಅಮೂಲ್ಯವಾದ ಕಲಾಸಂಪತ್ತನ್ನು ಉಳಿಸಿಕೊಳ್ಳುವುದು ಅವಶ್ಯವಾಗಿದೆ.

ಈ ಪಹಾರಾಹಾಲ್‌ದಲ್ಲಿ ಪ್ರಮುಖವಾಗಿ ೪ ಗೋಡೆಗಳಿಗೆ ನಾಲ್ಕೂ ಭಿತ್ತಿಗಳನ್ನು ರಚಿಸಿದ್ದು ರಾಮಾಯಣ, ಮಹಾಭಾರತ ಅರಮನೆ (ವಾಡೆ) ಮೂರು ಅಂತಸ್ತಿನ ಚಿತ್ರ ಈ ಮನೆಯ ನಿತ್ಯದ ನೋಟ, ಜಾತ್ರೆ, ಉತ್ಸವ ಸಂಭ್ರಮ, ಮೆರವಣಿಗೆಯಂತಹ ದೃಶ್ಯಗಳು ರಚನೆಗೊಂಡಿವೆ.

**I ಅಂತಃಪುರದ ದೃಶ್ಯಗಳು :**

ಅರಮನೆ (ವಾಡೆ) ಮೂರು ಅಂತಸ್ತಿನಲ್ಲಿ ಚಿತ್ರಿಸಲಾಗಿದ್ದು. ಈ ಭವ್ಯವಾದ ಅರಮನೆಯು ಸಂಪೂರ್ಣವಾಗಿ ಒಂದು ಗೋಡೆಯನ್ನು ಆವರಿಸಿದೆ ಅದರಲ್ಲಿ ದಾಸಿಯರು ಸಾಮಾನ್ಯ ಸ್ತ್ರೀಯರು, ಅತಿಥಿಗಳು ಬೇರೆ ಬೇರೆ ಕೆಲಸಗಳಲ್ಲಿ ನಿರತರಾದ ಸನ್ನಿವೇಶಗಳಿದ್ದು ಇಲ್ಲಿನ ಚಿತ್ರಗಳಿಗೆ ಬಂಗಾರದ ವರ್ಣವನ್ನು ಲೇಪಿಸಿರುವರು ಚಿನ್ನದ ಆಸೆಗಾಗಿ ಚಿತ್ರಗಳನ್ನು ಕೆದರಿ ಗಾಯಗೊಳಿಸಲಾಗಿದೆ.

೧. ಅರಮನೆಯ ಸಂಪೂರ್ಣ ಚಿತ್ರ

೨. ಅರಮನೆಯ ಕೆಳ ಅಂತಸ್ತಿನ ಚಿತ್ರ

೩. ರುಕ್ಮಿಣಿಯೊಂದಿಗೆ ರಾಸಲೀಲೆಯಲ್ಲಿರುವ ಕೃಷ್ಣ

೪. ಅರಮನೆಯ ಮೇಲಂತಸ್ತಿನ ಚಿತ್ರ

೫. ಶ್ರೀಕೃಷ್ಣನನ್ನು ಬೀಳ್ಕೊಡುತ್ತಿರುವ ರುಕ್ಮಿಣಿ

**Iಅ. ೧. ಅರಮನೆಯ ಸಂಪೂರ್ಣ ಚಿತ್ರ:**

ಅರಮನೆಯ ಸಂಪೂರ್ಣ ಚಿತ್ರವನ್ನು ಬರೆಯಲಾಗಿದೆ ಈ ಕೃತಿಯು ಮೂರು ಅಂತಸ್ತುಗಳಲ್ಲಿ ರೂಪುಗೊಂಡಿದ್ದು ಈ ಅರಮನೆಯು (ಕಟಾಂಜನ) ಗ್ಯಾಲರಿಗಳು, ಬಾಗಿಲುಗಳು, ಕಿಡಕಿಗಳು, ಗುಂಬಜಗಳು ಜಾಲಂದರಗಳು ಒಳಗೊಂಡಂತೆ ವಿವಿಧ ರೀತಿಯ ಆಕಾರಗಳೊಂದಿಗೆ ಅತ್ಯಂತ ಭವ್ಯವಾಗಿ ಮತ್ತು ಸುಂದರವಾಗಿ ಅರಮನೆಯ ಚಿತ್ರವನ್ನು ರಚಿಸಲಾಗಿದೆ. ಇದೊಂದು ರಾಜಸ್ಥಾನ ಅರಮನೆಯ ವಾಸ್ತು ವಿನ್ಯಾಸವನ್ನು ಹೋಲುತ್ತಿದೆ.

**೨. ಅರಮನೆಯ ಕೆಳ ಅಂತಸ್ತಿನ ಚಿತ್ರ :**

ಅರಮನೆಯ ಕೆಳ ಅಂತಸ್ತಿನ ಚಿತ್ರವಾಗಿದ್ದು ಈ ಕೃತಿಯಲ್ಲಿ ಅರಮನೆಯ ಗ್ಯಾಲರಿಯನ್ನು ಕಾಣುತ್ತಿದ್ದು, ಎಡಬಲಗಳಲ್ಲಿ ಅರಮನೆಯ ಕಟ್ಟಡ ಗುಂಬಜಗಳು, ಕಿಡಕಿ, ಬಾಗಿಲುಗಳಿಂದ ಕೂಡಿದ್ದರೆ. ಮದ್ಯದಲ್ಲಿ ಬಯಲು ಗ್ಯಾಲರಿ ಕೆಂಪುವರ್ಣದಲ್ಲಿದೆ. ಎಡಬಲ ಕಟ್ಟಡಗಳು ಕಂದು ಕೆಂಪುಮತ್ತು ಹಳದಿ ವರ್ಣದಲ್ಲಿರುವದರಿಂದ ನೋಡುಗರ ದೃಷ್ಠಿಯು ನೇರವಾಗಿ ಗ್ಯಾಲರಿಗೆ ಹೋಗುತ್ತಿದ್ದು ಅಲ್ಲಿ ಗೋಪಿಕಾ ಸ್ತ್ರೀಯರೊಂದಿಗೆ ಶ್ರೀಕೃಷ್ಣನಿರುವನು ಹಿನ್ನೆಲೆಯಲ್ಲಿ ಕೆಂಪುವರ್ಣವಿದ್ದ ಗ್ಯಾಲರಿ ಅಂತ್ಯಕ್ಕೆ ಹಳದಿ ವರ್ಣದ ಕಂಪೌಂಡ ಗೋಡೆ ಕಾಣಿಸುತ್ತಿದೆ. ಈ ಭಾಗವು ತುಂಬಾ ಸುಂದರವಾಗಿ ಚಿತ್ರಿಸಿರುವುದು ಕಂಡು ಬರುತ್ತದೆ.

**೩. ರುಕ್ಮಿಣಿಯೊಂದಿಗೆ ರಾಸಲೀಲೆಯಲ್ಲಿರುವ ಕೃಷ್ಣ :**

ಅರಮನೆಯ ಕೆಳ ಅಂತಸ್ತಿನ ಗ್ಯಾಲರಿಯ ಮಧ್ಯದಲ್ಲಿ ಶ್ರೀಕೃಷ್ಣನ ರಾಸಲೀಲೆಯ ನಂತರದ ದೃಶ್ಯ ಇದಾಗಿದೆ. ಇದರಲ್ಲಿ ಕೃಷ್ಣನು ರುಕ್ಮಿಣಿಯೊಡನೆ ಸರಸದಲ್ಲಿ ತೊಡಗಿದ್ದು. ಅವರ ಅಕ್ಕಪಕ್ಕದಲ್ಲಿ ಇನ್ನಿಬ್ಬರು

ಸಖಿಯರಿರುವರು ಅರಮನೆಯ ಮಧ್ಯದಲ್ಲಿ ಬಯಲು ಗ್ಯಾಲರಿಗಳನ್ನು ನಿರ್ಮಿಸಿದ್ದು. ಕೆಂಪು ವರ್ಣದ ತೆಳಹಾಸು ಇದ್ದು ಎಡಬಲಗಳಲ್ಲಿ ಅರಮನೆಯ ಕಟ್ಟಡಗಳು ಕಂದು ಗೆಂಪು ವರ್ಣದಲ್ಲಿ ಮತ್ತು ಹಳದಿ ವರ್ಣದಲ್ಲಿದ್ದು. ನೋಡುಗರ ದೃಷ್ಟಿಯು ನೇರವಾಗಿ ಗ್ಯಾಲರಿಗೆ ಹೋಗುತ್ತಿದೆ. ಈ ಗ್ಯಾಲರಿಯ ಮಧ್ಯದಲ್ಲಿ ಒಂದು ಮಂಚದ ಮೇಲೆ ಕೃಷ್ಣನು ತನ್ನ ರಾಣಿಯನ್ನು ತನ್ನ ತೊಡೆಯಮೇಲೆ ಕುಳ್ಳಿರಿಸಿಕೊಂಡು ಸರಸದಲ್ಲಿ ತೊಡಗಿರುವನು ಕೃಷ್ಣನು ತನ್ನೆರಡೂ ಕೈಗಳಿಂದ ಅವಳನ್ನು ತಬ್ಬಿ ಹಿಡಿದುಕೊಂಡಿದ್ದು. ಬಂಧನದಿಂದ ಹೊರಬರಲು ಯತ್ನಿಸುತ್ತಿರುವ ರಾಣಿ ಅವಳ ಪಕ್ಕದಲ್ಲಿಯೇ ನಿಂತಿರುವ ಸಖಿಯೊಬ್ಬಳು ಅವಳ ಎರಡೂ ಕೈಗಳನ್ನು ಹಿಡಿದು ಮೇಲೆಬ್ಬಿಸಲು ಸಹಾಯಮಾಡುತ್ತಿದ್ದಾಳೆ, ಬಲದಲ್ಲಿ ಇನ್ನೊಬ್ಬಳು ಏನೋ ವಸ್ತುವನ್ನು ತಂದು ಕೊಡುತ್ತಿದ್ದಾಳೆ. ಇವಳು ಹಸಿರುವರ್ಣದ ಸೀರೆ, ಕೆಂಪು ವರ್ಣದ ರವಿಕೆಯನ್ನು ಹಾಕಿಕೊಂಡಿರುವಳು. ಇನ್ನೊಬ್ಬ ಸಖಿ ಕೆಂಪು ಮಿಶ್ರಿತ ಹಳದಿ ಸೀರೆಯನ್ನು ಉಟ್ಟಿದ್ದು. ಹಸಿರು ವರ್ಣದ ರವಿಕೆಯನ್ನು ತೊಟ್ಟಿದ್ದಾಳೆ, ಕೃಷ್ಣನು ನೀಲವರ್ಣದವನಾಗಿದ್ದು ಹಳದಿ ಪಂಚೆ ಉಟ್ಟಿದ್ದು ಕೆಂಪು ವರ್ಣದ ನಕ್ಷೆ ಹೊಂದಿರುವದು. ಮೇಲುಡುಗೆ ಉಟ್ಟುಕೊಂಡಿಲ್ಲ. ಕೆಂಪು ದುಪ್ಪಟ್ಟಾವಿದ್ದು ಕೊರಳಲ್ಲಿ ಮುತ್ತಿನ ಸರ ತಲೆಗೆ ಕಿರೀಟವಿದೆ. ಈ ಕಲಾಕೃತಿಯಲ್ಲಿ ಕಲಾವಿದ ದುಂಡು ತನ ತರಲು ಪ್ರಯತ್ನಿಸಿದ್ದು ಕಂಡು ಬರುತ್ತದೆ. ಆದರೆ ಈ ಮಂಚದ ಮುಂದಿರುವ ಪಾತ್ರೆಗಳು ಮಾತ್ರ ಸತ್ವ ಶಾಲಿಯಾಗಿಲ್ಲ. ಉಳಿದ ಎಲ್ಲ ಅಂಶಗಳೂ ಈ ಕಲಾಕೃತಿಯಲ್ಲಿ ಉತ್ಕೃಷ್ಟವಾಗಿ ಮೂಡಿಬಂದಿವೆ.

**೪. ಅರಮನೆಯ ಮೇಲಂತಸ್ತಿನ ಚಿತ್ರ:**

ಅರಮನೆಯ ಮೇಲಂತಸ್ತಿನ ಚಿತ್ರವಿದಾಗಿದ್ದು. ಮೇಲ್ಗಡೆಯ ಮದ್ಯ ಭಾಗದಲ್ಲಿ ಬಯಲು ಗ್ಯಾಲರಿಯನ್ನು ಹೊಂದಿದ್ದು. ಕೆಂಪು ವರ್ಣದಲ್ಲಿ ರಚನೆಗೊಂಡಿದೆ. ಈ ಗ್ಯಾಲರಿಯ ಎಡಭಾಗದಲ್ಲಿ ಅರಮನೆಯ ತುದಿಯ ಭಾಗವಿದ್ದು ಗುಂಬಜವನ್ನು ಕಾಣಬಹುದಾಗಿದೆ. ಇದು ಕಂದು ಗೆಂಪು ಕಪ್ಪುಹಳದಿವರ್ಣಗಳಿಂದ ಕೂಡಿದೆ. ಎದುರು ಗಡೆ ಕಟಾಂಜನವನ್ನು ಮಾಡಿದ್ದು ಅದರ ಮುಂದುಗಡೆಯಲ್ಲಿ ಚೌರಸ ಆಕಾರದ ಪಟ್ಟಿಕೆಗಳನ್ನು ಮಾಡಿದ್ದು. ಅದರಲ್ಲಿ ಕೆಂಪು ಗುಲಾಬಿ ಹೂವು ಮತ್ತು ಎಲೆಗಳಿಂದ ತುಂಬಿಕೊಂಡಿದೆ. ಬಯಲು ಗ್ಯಾಲರಿಯಲ್ಲಿ ಯುದ್ಧಕ್ಕೆ ಸಿದ್ಧನಾಗಿ ನಿಂತಿರುವ ಕೃಷ್ಣನನ್ನು ಆರತಿಮಾಡಿ ಶುಭ ಕೋರುತ್ತಿರುವ ರುಕ್ಮಿಣಿ ಅದನ್ನು ನೋಡುತ್ತಿರುವ ರಾಧೆಯ ಚಿತ್ರವಿದೆ.

**೫. ಯುದ್ಧಕ್ಕೆ ಸಿದ್ದನಾಗಿರುವ ಕೃಷ್ಣನನ್ನು ಶುಭಕೋರುತ್ತಿರುವ ರುಕ್ಮಿಣಿ :**

ಅರಮನೆಯ ಮೇಲಂತಸ್ತಿನ ಮಧ್ಯದಲ್ಲಿರುವ ಕೆಂಪು ವರ್ಣದ ಗ್ಯಾಲರಿಯಲ್ಲಿ ಯುದ್ಧಕ್ಕೆ ಸಿದ್ದನಾಗಿರುವ ಕೃಷ್ಣ ಆಯುಧಗಳ ಸಮೇತನಾಗಿ ನಿಂತಿದ್ದು. ಪಟ್ಟದ ರಾಣಿಯಾದ ರುಕ್ಮಿಣಿಯು ಆರತಿ ತಟ್ಟೆಯನ್ನು

ತನ್ನೆರಡು ಕೈಗಳಲ್ಲಿ ಹಿಡಿದುಕೊಂಡು ಕೃಷ್ಣನಿಗೆ ಆರತಿ ಮಾಡಿ ಶುಭಕೋರುತ್ತಿರುವಳು. ಕೆಂಪು ಸೀರೆ ಹಳದಿ ಅಂಚುಗಳನ್ನು ಹೊಂದಿದ್ದು ಹಸಿರು ಕುಪ್ಪಸ ತೊಟ್ಟಿರುವಳು ಈ ದೃಶ್ಯವನ್ನು ವೀಕ್ಷಿಸುತ್ತ ನಿಂತಿರುವ ರಾಧೆ ಹಸಿರು ಸೀರೆ ಹಳದಿ ಅಂಚುಗಳಿರುವ ಮತ್ತು ಹಳದಿ ಸೆರಗನ್ನು ಹೊಂದಿದ ಸೀರೆಯನ್ನುಟ್ಟುಕೊಂಡು ಕೆಂಪು ರವಿಕೆಯೊಂದಿಗೆ ಆಭರಣಗಳನ್ನು ಧರಿಸಿಕೊಂಡು ನಿಂತಿರುವ ರಾಧೆಯರಿರುವ ಈ ಚಿತ್ರದ ಮುನ್ನೆಲೆಯಲ್ಲಿ ಕಟಾಂಜನವಿದ್ದು. ಅದರ ಮುಂದುಗಡೆಯಲ್ಲಿ ಚೌರಸದ ಪಟ್ಟಿಕೆಗಳಿದ್ದು ಅದರಲ್ಲಿ ಕೆಂಪು ಮತ್ತು ಹಳದಿಯ ವರ್ಣಗಳ ಹೂವುಗಳು ಹಸಿರು ಎಲೆಗಳಿಂದ ತುಂಬಿ ಕೊಂಡಿದ್ದು ಸುಂದರವಾಗಿ ಮೂಡಿಬಂದಿವೆ ಅಲ್ಲಲ್ಲಿ ವರ್ಣಗಳು ಹೋಗಿದ್ದುದು ಕಂಡು ಬರುತ್ತದೆ.

**೬. ಮಧ್ಯ ಅಂತಸ್ತಿನ ಬಯಲುಗ್ಯಾಲರಿಯ ದೃಶ್ಯ:**

ಅರಮನೆಯ ಮಧ್ಯ ಅಂತಸ್ತಿನಲ್ಲಿರುವ ಬಯಲು ಗ್ಯಾಲರಿಯ ದೃಶ್ಯವಾಗಿದ್ದು ಈ ಗ್ಯಾಲರಿ ಬಲಬದಿಗೆ ಅರಮನೆಯ ಭಾಗವನ್ನು ತೋರಿಸಿದ್ದು ರಾಜಸ್ಥಾನಿ ಶೈಲಿಯ ಅರಮನೆಯ ಕಿಡಕಿಗಳು ಜಾಲಂದರಗಳಿಂದ ಜನ ಇಣುಕಿ ನೋಡಿತ್ತಿರುವ ದೃಶ್ಯ ಹಿಂದುಗಡೆಯಲ್ಲಿಯೂ ಅರಮನೆಯ ಕಟ್ಟಡ ಗ್ಯಾಲರರಿಯ ವರ್ಣಕೆಂಪಾಗಿದ್ದರೆ ಅರಮನೆಯ ಕಟ್ಟಡದ ವರ್ಣ ಹೆಳದಿಯಾಗಿದೆ ಬಯಲು ಗ್ಯಾಲರಿಯ ಎಡಭಾಗದಲ್ಲಿ ಕಪ್ಪುವರ್ಣದ ಗೋಡೆ ಇದೆ. ಎದುರುಗಡೆ ಚೌರಸದ ಪಟ್ಟಿಯಲ್ಲಿ ಹೂವು ಎಲೆಗಳಿಂದ ತುಂಬಲಾಗಿದೆ.

**೭. ಪ್ರಣಯ ನಿರತ ಕೃಷ್ಣನನ್ನು ಕಂಡು ವಿಸ್ಮಯಳಾದ ರಾಧೆ :**

ಮಧ್ಯ ಅಂತಸ್ತಿನ ಬಯಲು ಗ್ಯಾಲರಿಯಲ್ಲಿ ಪ್ರಣಯ ನಿರತ ಕೃಷ್ಣನನ್ನು ಕಂಡು ವಿಸ್ಮಯಳಾದ ರಾಧೆ ಅಂತಃಪುರದ ಈ ಕೆಂಪು ಹಾಸಿನ ಬಯಲು ಗ್ಯಾಲರಿಯ ಮಧ್ಯದಲ್ಲಿ ಅಲಂಕಾರಯುಕ್ತವಾದ ಮಂಚದಲ್ಲಿ ಶ್ರೀಕೃಷ್ಣನು ಕುಳಿತಿದ್ದು ಮೇಲುಡುಗೆಯನ್ನು ತೊಟ್ಟುಕೊಂಡಿಲ್ಲ ಹಳದಿ ಪಿತಾಂಬರವನ್ನು ಉಟ್ಟುಕೊಂಡಿದ್ದು ತಲೆಯಮೇಲೆ ಕಿರೀಟವನ್ನು ಹಾಕಿಕೊಂಡಿದ್ದು ತನ್ನ ಪ್ರಿಯಕರಳನ್ನು ತೊಡೆಯಮೇಲೆ ಕೂಡ್ರಿಸಿಕೊಂಡು ತನ್ನ ಎಡಗೈಯನ್ನು ಪ್ರಿಯಕರಳ ಬುಜದ ಮೇಲೆ ಕೈಹಾಕಿಕೊಂಡಿದ್ದು ಬಲಗೈಯಿಂದ ಕುಚಗಳನ್ನು ಹಿಡಿದಿದ್ದು ಪ್ರಿಯಕರಳನ್ನು ಮುತ್ತಿಕ್ಕುವ ಸನ್ನಿವೇಶಕಂಡು ವಿಸ್ಮಯಳಾದ ರಾಧೆಯು ನೋಡುತ್ತ ನಿಂತಿದ್ದಾಳೆ. ಅವಳ ಮುಖದಲ್ಲಿ ಅಶಾಭಾವ ತುಂಬಿದೆ, ಅವಳೂ ಇಂತಹ ಕನಸಿನ ನಿರೀಕ್ಷೆಯಲ್ಲಿರುವಂತೆ ಚಿತ್ರಿಸಲಾಗಿದೆ. ಕೃಷ್ಣನ ಎದುರಿನಲ್ಲಿ ಪನ್ನೀರು ಪಂಚ ಪಾತ್ರೆಗಳು ಹಣ್ಣು ಹಂಪಲ, ಎಲೆ ಅಡಿಕೆಯನ್ನು ಹಾಕಿದ ಪಾತ್ರೆಗಳಿವೆ. ಮತೊಂದು ಕಡೆಗೆ ಇನ್ನಿಬ್ಬರು ಸ್ತ್ರೀಯರು ನಿಂತಿದ್ದಾರೆ ಚಿತ್ರದ ಬಲಗಡೆಗೆ ರಾಣಿಯರ ಅಂತಃಪುರವನ್ನು ತೋರಿಸಿ ಅದರಲ್ಲಿರುವ ಉನ್ನತ ಸ್ತ್ರೀಯರು ಹಾಗೂ ಸಖಿಯರನ್ನು ತೋರಿಸಿದ್ದಾರೆ. ಇವರು ಕಿಡಕಿಗಳಿಂದ ಇಣುಕಿ ನೋಡುತ್ತಿದ್ದಾರೆ ಎದುರಿನಲ್ಲಿ ಚೌರಸ ಆಕಾರದಲ್ಲಿ

ಚೌಕಟ್ಟುಗಳನ್ನು ಮಾಡಿದ್ದು ಅದರಲ್ಲಿ ವಿವಿಧ ರೀತಿಯ ಹೂವು ಮತ್ತು ಎಲೆಗಳನ್ನು ತೊಂಬಿದ್ದು ಮಧ್ಯದಲ್ಲಿ ಕಾರಂಜಿಯಿರುವ ತೊಟ್ಟಿ ಇದೆ ಸಂಯೋಜನೆಯ ಹಿನ್ನೆಲೆಯಾಗಿ ಕೆಂಪು ವರ್ಣವನ್ನು ಬಳಸಲಾಗಿದೆ.

ಈ ಮೂರಂತಸ್ತಿನ ಅರಮನೆಯ ಸಂಪೂರ್ಣ ಚಿತ್ರ, ಮೇಲಂತಸ್ತಿನ ಚಿತ್ರ ಕೆಳಅಂತಸ್ತಿನ ಚಿತ್ರ, ಮಧ್ಯದಲ್ಲಿನ ಗ್ಯಾಲರಿಯ ದೃಶ್ಯಗಳು, ಎಡಬಲಗಳಲ್ಲಿ ಆರಮನೆಯ ಗ್ಯಾಲರಿಗಳು, ಜಾಲಂದರಗಳು, ಗುಂಬಜಗಳು, ಕಮಾನುಗಳು ಹೀಗೆ ಆರಮನೆಯು ಭವ್ಯವಾಗಿ ಮೂಡಿಬಂದಿದ್ದು ಇಲ್ಲಿ ಯಥಾದರ್ಶನ ಅಕಾರ, ಗಾತ್ರ, ಪ್ರಮಾಣಗಳು ವಸ್ತುವಿನ ಅಂದವನ್ನು ಇಮ್ಮಡಿಗೊಳಿಸಿವೆ. ಅರಮನೆಯ ಕಿಡಕಿಗಳಿಂದ ಇಣುಕಿ ನೋಡುತ್ತಿರುವ ಮಹಿಳೆಯರ ಹಾವಭಾವಗಳು ಸುಂದರವಾಗಿ ಮೂಡಿಬಂದಿವೆ.

**Iಬ. ಬಣ್ಣದೋಕುಳಿಯ (ವಸಂತೋತ್ಸವದ) ದೃಶ್ಯ :**

ಈ ವಸಂತೋತ್ಸವದಲ್ಲಿ ಬಣ್ಣ ಆಡುತ್ತಿರುವ ದೃಶ್ಯವಿದೆ. ಉದ್ಯಾನವೊಂದರಲ್ಲಿ ಕೃಷ್ಣ ಮತ್ತು ಗೋಪಿಕಾಸ್ತ್ರೀಯರು ಅಷ್ಟೇ ಅಲ್ಲದೇ ಅನೇಕ ಜನರೂ ಈ ಬಣ್ಣದಾಟದಲ್ಲಿ ಪಾಲ್ಗೊಂಡಿದ್ದುದು ಕಂಡು ಬರುತ್ತದೆ. ಸುಂದರವಾದ ಉದ್ಯಾನವನಕ್ಕೆ ಈ ಬಣ್ಣದಾಟದಿಂದಾಗಿ ಹೆಚ್ಚಿನ ಕಳೆಬಂದಿದೆ. ಎಡಬಲಗಳಲ್ಲಿ ಮತ್ತು ಹಿಂದಕ್ಕೆ ರಾಣೀವಾಸದ ದೃಶ್ಯಗಳಿವೆ. ಮಧ್ಯದಲ್ಲಿ ಅರಮನೆಯ ಎದುರಿನ ಈ ಉದ್ಯಾನವನವು ವಿವಿಧ ಬಣ್ಣಗಳಿಂದ ತುಂಬಿಹೋಗಿದೆ. ಅದರ ಮಧ್ಯದಲ್ಲಿ ತಾವರೆಯೊಂದರ ಮೇಲೆ ಕೃಷ್ಣನಿಂತಿದ್ದಾನೆ ಆತ ಸಮೀಪಬಂದ ಗೋಪಿಕಾಸ್ತ್ರೀಯಳ ಕೈಹಿಡಿದುಕೊಂಡಿದ್ದು ಆತನ ಇನ್ನೊಂದು ಕೈಯಲ್ಲಿ ಓಕುಳಿಯ ಬಣ್ಣದ ನೀರನ್ನು ಚಿಮ್ಮಿಸುವ ಪಿಚಕಾರಿಯಿದೆ ಆತನ ಮುಂದುಗಡೆಯ ಅಕ್ಕಪಕ್ಕದಲ್ಲಿ ನಿಂತಿರುವ ಹಲವಾರು ಸ್ತ್ರೀಯರು ಪಾತ್ರೆಗಳಲ್ಲಿ ಕೆಂಬಣ್ಣದ ಓಕುಳಿಯ ನೀರನ್ನು ತುಂಬಿಸಿಕೊಂಡು ಪಿಚಕಾರಿಗಳಿಂದ ಬಣ್ಣದ ನೀರನ್ನು ಒಬ್ಬರ ಮೇಲೊಬ್ಬರು ಎಸೆಯುತ್ತಾ ಕ್ರೀಡೆಯಲ್ಲಿ ನಿರತರಾಗಿರುವರು. ಇದರ ಮುಂಬಾಗದಲ್ಲಿ ಅನೇಕ ಸ್ತ್ರೀಯರು ಈ ಹಬ್ಬದಲ್ಲಿ ವಿವಿಧ ರೀತಿಯಲ್ಲಿ ಪಾಲ್ಗೊಂಡಿದ್ದು ಬಿಂದಿಗೆಯನ್ನೋ ಬುಟ್ಟಿಯನ್ನೋ ಹೊತ್ತುನಿಂತವರಾದರೆ ಕೆಲವೊಂದು ಸ್ತ್ರೀಯರು ಈ ದೃಶ್ಯವನ್ನು ನೋಡಲು ಬಂದು ನಿಂತಿರುವರು ಈ ಉತ್ಸವಕ್ಕೆ ಮೆರಗು ಕೊಡಲು ಒಬ್ಬಳು ತಂಬೂರಿ ಹಿಡಿದು ನಿಂತಿದ್ದರೆ ಮತ್ತೊಬ್ಬಳು ನರ್ತಿಸುತ್ತಿದ್ದಾಳೆ. ಇನ್ನೊಬ್ಬಳು ಸಾರಂಗಿ ನುಡಿಸುತ್ತಿದ್ದಾಳೆ ನಾಲ್ಕನೆಯವಳು ಮೃದಂಗ ಬಾರಿಸುತ್ತಿದ್ದಾಳೆ ಸುಮಾರು ಮೂವತ್ತು ಜನರಿರುವ ಈ ಚಿತ್ರರಚನೆಯು ತುಂಬಾ ಜಾಣ್ಮೆಯಿಂದಲೇ ರಚಿಸಿದ್ದು ವ್ಯಕ್ತಿಗಳ ಮತ್ತು ವಸ್ತುಗಳ ಜೋಡಣೆ ಹೊಂದಾಣಿಕೆ, ವರ್ಣಗಳ ಸಮತೋಲನ, ಹಿತಮಿತವಾಗಿ ಮೂಡಿಬಂದಿವೆ.

ಸುಮಾರು ೩೦ ಜನರಿರುವ ಈ ಸಂಯೋಜನೆಯಲ್ಲಿ ಪ್ರಮುಖವಾದ ವ್ಯಕ್ತಿಗಳು ಶ್ರೀ ಕೃಷ್ಣ ರಾಧೆಯರು, ಗೋಪಿಕಾಸ್ತ್ರೀಯರು, ನೃತ್ಯಗಾರರು, ಸಂಗೀತಗಾರರು, ನೋಡುತ್ತ ನಿಂತಿರುವ ಜನಸಾಮಾನ್ಯ ಹೀಗೆ ವಿವಿಧ ಭಂಗಿಯಲ್ಲಿರುವ ಮಾನವಾಕೃತಿಗಳನ್ನು ಸಂಯೋಜಿಸಿದ ರೀತಿ ಹಾಗೂ ವಿಶಿಷ್ಟ ವರ್ಣಗಳೊಂದಿಗೆ ಸ್ಥಳಾವಕಾಶ, ವರ್ಣಗಳ ಹೊಂದಾಣಿಕೆ, ಆಕಾರ, ಗಾತ್ರ, ಪ್ರಮಾಣಗಳೊಂದಿಗೆ ಸಂಯೋಜನೆ ರೂಪುಗೊಂಡಿದ್ದು ಉತ್ತಮವಾಗಿ ಮೂಡಿಬಂದಿದೆ.

**೨. ಕೃಷ್ಣನ ರಾಸಲೀಲೆಯನ್ನು ನೋಡುತ್ತಿರುವ ಸಖಿಯರು :**

ಈ ಕಲಾಕೃತಿಯಲ್ಲಿಯೂ ಸಖಿಯೊಂದಿಗೆ ರಾಸಲೀಲೆಯಲ್ಲಿ ತೊಡಗಿದ ಕೃಷ್ಣ ಸಖಿಯ ಹಿಂದುಗಡೆಯಿಂದ ಬಂದು ಮಂಚದ ಮೇಲಿರುವ ಸಖಿಯನ್ನು ತಬ್ಬಿಕೊಂಡಿದ್ದು ಹಾಗೂ ಸಖಿಯನ್ನು ಮುದ್ದಿಸುತ್ತಿರುವುದನ್ನು ಎದುರುಗಡೆಯಲ್ಲಿರುವ ಸಖಿಯರು ಆಸೆಕಣ್ಣುಗಳಿಂದ ನೋಡುತ್ತಿರುವ ದೃಶ್ಯವೂ ಉತ್ತಮವಾಗಿದ್ದು ಭಾವನೆಗಳನ್ನು ಕೆರಳಿಸುವಂತೆ ಮಾಡಲಾಗಿದೆ. ಅಷ್ಟೇ ಅಲ್ಲದೇ ಬಲಗಡೆಯಲ್ಲಿರುವ ಅಂತಃಪುರದಿಂದ ಇಣುಕಿನೋಡುತ್ತಿರುವ ಸಖಿಯರು ಕಂಡು ಬರುತ್ತಿದ್ದು ಕೃಷ್ಣನ ಮಂಚದ ಎದುರಿನಲ್ಲಿರುವ ಹಣ್ಣು ಹಂಪಲಗಳು ಒಂದುತಟ್ಟೆಯಲ್ಲಿದ್ದರೆ ( ಪನ್ನೀರು) ಕುಡಿಯುವ ಸಾಮಗ್ರಿಗಳು ಹೂಜೆ ಗ್ಲಾಸು ಇತ್ಯಾದಿ ಸಲಕರಣೆಗಳಿದ್ದುದು ಕಂಡು ಬರುತ್ತದೆ.

**೩. ಯಜ್ಞಯಾಗದ ದೃಶ್ಯ :**

ಯಜ್ಞ ದಲ್ಲಿ ತೊಡಗಿದ ಋಷಿಗಳು ಈ ಯಜ್ಞವನ್ನು ಮಾಡಿಸುತ್ತಿರುವ ರಾಜಕುಮಾರರು. ಸುಂದರವಾಗಿ ಮೂಡಿಬಂದಿದ್ದು. ಚಿತ್ರದ ಹಿನ್ನೆಲೆಯು ಕೆಂಪು ವರ್ಣದಲ್ಲಿದ್ದು. ಮುಂಭಾಗದಲ್ಲಿ ಒಂದು ಮಂಟಪದ ಕೆಳಗೆ ಕಿರೀಟಧರಿಸಿದ ದಾಡಿಬಿಟ್ಟ ದೊರೆಯೊಬ್ಬ ನಿಂತಿದ್ದಾನೆ. ಅವನ ಮುಂದೆ ಒಂದೇ ಬಗೆಯ ಧೊತ್ರ ಉತ್ತರೀಯ ಕಿರೀಟವನ್ನು ಧರಿಸಿದ ಐವರು ರಾಜಕುಮಾರರು ಕೈಒಡ್ಡಿ ನಿಂತಿರುವರು. ಈ ಯಾಗನೋಡಲು ಬಂದ ಜನಸಮುದಾಯವನ್ನು ಆಚೀಚೆ ನಾಲ್ಕು ಸಾಲುಗಳಲ್ಲಿ ಆಕರ್ಷಕವಾಗಿ ಚಿತ್ರಿಸಿದ್ದಾರೆ. ಎಡಗಡೆಯ ಮೇಲಿನ ಸಾಲಿನಲ್ಲಿ ಹಲವಾರು ರಾಜಕುಮಾರರು ಸಾಲಾಗಿ ಕುಳಿತಿದ್ದು ಬಲಗಡೆಯಾಗಕ್ಕೆ ನೂರಾರೂ ಜನರನ್ನು ವಿವಿಧ ವರ್ಣದ ಉಡುಗೆ ತೊಡುಗೆಗಳಲ್ಲಿ ಚಿತ್ರಿಸಿದ್ದು. ಒಬ್ಬೊಬ್ಬ ವ್ಯಕ್ತಿಯ ಎತ್ತರ ೨ ಇಂಚುಗಳಿಗಿಂತ ಎತ್ತರವಾಗಿಲ್ಲ. ಸೂಕ್ಷ್ಮ ವಿವರಗಳೊಂದಿಗೆ ಚಿತ್ರಿಸಿದ್ದು ಅವರ ಮುಖ ಭಾವಗಳು ಯಾಗದ ಗಂಭೀರ ಆವರಣಕ್ಕೆ ತಕ್ಕುದಾದ ರೀತಿಯಲ್ಲಿ ಬಿಂಬಿಸಲು ಪ್ರಯತ್ನಿಸಿರುವುದು ಕಂಡು ಬರುತ್ತದೆ. ಚಿಕ್ಕದಾದ ಈ ಚಿತ್ರಗಳಲ್ಲಿ ಭಾವನೆಗಳನ್ನು ಹೊರಹಾಕಲು ಪ್ರಯತ್ನಿಸಿದ್ದು ಮಹತ್ವದ ಅಂಶವೇ ಆಗಿದೆ.

ಹೀಗೆ ವೈವಿಧ್ಯಮಯವಾದ ಚಿತ್ರಗಳಿಂದ "ಪಹಾರಾಹಾಲ್" ತುಂಬಿಕೊಂಡಿದೆ. ಆದರೂ ಕೃಷ್ಣನ ರಾಸಲೀಲೆಗೆ ಹೆಚ್ಚು ಒತ್ತು ಕೊಟ್ಟು ರಚಿಸಿರುವುದು ಕಂಡು ಬರುತ್ತದೆ. ಈ ಕಲಾವಿದರು ಶೃಂಗಾರಕ್ಕೆ ಸರಸಕ್ಕೆ ಸಂಬಂಧಪಟ್ಟ ಚಿತ್ರಗಳೇ ಅಧಿಕವಾಗಿವೆ. ಈಗ ಮೇಲೆ ಹೇಳಲಾದ ಚಿತ್ರಗಳಲ್ಲದೇ ಕೃಷ್ಣನು ಮಂಚದ ಮೇಲೆ ಕುಳಿತು ಕಾಮಕೇಳಿಯಲ್ಲಿ ತೊಡಗಿದ ದೃಶ್ಯಗಳು, ಸರಸಸಲ್ಲಾಪದ ದೃಶ್ಯಗಳು ಇಲ್ಲಿ ರಚನೆಗೊಂಡಿದ್ದು ಸಖಿಯರೊಂದಿಗೆ ಸರಸಸಲ್ಲಾಪ ಸಂಭಾಷಣೆ, ಶೃಂಗಾರ ಚೇಷ್ಟೆಗಳಿಂದ ಸಖಿಯರನ್ನು ಕೆರಳಿಸುವಂತಹ ಕ್ರಿಯೆಗಳಲ್ಲಿ ತೊಡಗಿರುವ ಚಿತ್ರಗಳು ಇಲ್ಲಿ ಮೂಡಿಬಂದಿವೆ.

ಈ ಪಹಾರಾಹಾಲ್ ದಲ್ಲಿಯ ಭಿತ್ತಿ ಚಿತ್ರಗಳು ಸಾಮಾನ್ಯವಾಗಿ ಕೆಂಪು ವರ್ಣದ ಹಿನ್ನೆಲೆಯನ್ನು ಹೊಂದಿದ್ದು. ಹೆಚ್ಚಾಗಿ ಪ್ರಖರವರ್ಣಗಳನ್ನು ಬಳಸಿರುವರು. ಅಲ್ಲಲ್ಲಿ ಚಿತ್ರಕ್ಕೆ ನೆರಳು ಬೆಳಕುಗಳನ್ನು ಕೃತಿಗಳಲ್ಲಿ ತರಲು ಪ್ರಯತ್ನಿಸಿರುವರು. ದಪ್ಪದಾದ ಹೊರರೇಖೆಗಳು ನೀಲಿ ಹಾಗೂ ಕಪ್ಪು ಮತ್ತು ಕೆಂಪು ವರ್ಣಗಳಿಂದ ಎಳೆಯಲಾಗಿದೆ. ಇಲ್ಲಿಯ ಚಿತ್ರಗಳು ರಾಮಾಯಣ, ಭಾಗವತ, ಹಾಗೂ ಸಮಕಾಲೀನ ವಿಷಯಗಳಿಗೆ ಸಂಬಂಧಿಸಿದ ಚಿತ್ರಗಳು ರಚನೆಗೊಂಡಿವೆಯಾದರೂ ಕೃಷ್ಣನ ರಾಸಲೀಲೆಗಳಿಗೆ ಸಂಬಂಧಿಸಿದ ಚಿತ್ರಗಳು ಅಧಿಕವಾಗಿವೆ. ಇದರಿಂದಾಗಿಯೇ ಡಾ. ಶಿವರಾಮ ಕಾರಂತರು ಮತ್ತು ಡಾ. ಯಾದಪ್ಪ ಪರದೇಶಿಯವರು ಪಹಾರಾಹಾಲ್ ಶಯ್ಯಾಗಾರವೆಂದೂ ಒಳಕೋಣೆಯೆಂದೂ ಕರೆದಿರುವರು ನಿಜವಾಗಿಯೂಇದಾವುದೂ ಅಲ್ಲಲ್ಲಿ ಪಹಾರಾಹಾಲ್ ಎಂದರೆ ಕಾವಲುಗಾರನ ಕೋಣೆ ಅಥವಾ ನಿರೀಕ್ಷಣಾಗಾರನ ಕೋಣೆ ಎಂದೂ ಕರೆಯುವುದು ಸೂಕ್ತವಾಗಿದೆ. ಇಲ್ಲಿಯ ಚಿತ್ರಗಳು ಸೂಕ್ಷ್ಮವೂ ಆಕರ್ಷಕವೂ ಆಗಿದ್ದು ಉಜ್ವಲವರ್ಣಗಳನ್ನು ಹೊಂದಿವೆ.

ನಿಪ್ಪಾಣಿ ರಾಜವಾಡೆ ಭಿತ್ತಿಚಿತ್ರಗಳು ವಸ್ತುವಿಷಯ ತಂತ್ರ ಶೈಲಿ ರೇಖಾವಿನ್ಯಾಸ, ಸ್ಥಳಾವಕಾಶ, ವರ್ಣವಿನ್ಯಾಸ, ಸಮತೋಲನಗಳಂತಹ ಸಂಯೋಜನಾತತ್ವಗಳನ್ನು ಅತ್ಯಂತ ಶಕ್ತಿಶಾಲಿಯಾಗಿ ಬಳಸಿಕೊಂಡಿದ್ದು. ಒಂದೊಂದು ಕಲಾಕೃತಿಯಲ್ಲಿ ೩೦ ರಿಂದ ನಾಲವತ್ತರವರೆಗೆ ಮಾನವಾಕೃತಿಗಳನ್ನು ಸೇರಿಸಿ ಸಂಯೋಜನೆಯನ್ನು ಮಾಡಿದ ರೀತಿ ಹಗೂ ಚಿತ್ರಗಳಲ್ಲಿಯ ಭಾವನೆಗಳು ಅದ್ಭುತವಾಗಿ ಮೂಡಿಬಂದಿವೆ. ವಿಷಯುಗಳ ಆಯ್ಕೆಯುಲ್ಲಿಯೂ ಹಿಂದೆ ಬಿದ್ದಿಲ್ಲ. ರಾಮಾಯಣ, ಭಾಗವತ ಜಯದೇವನ ಗೀತಗೋವಿಂದದಂತಹ ಕೃತಿಗಳನ್ನು ಬಳಸಿಕೊಂಡಿದ್ದು. ಅಲ್ಲದೇ ಸ್ಥಳೀಯ ಸಂದರ್ಭ ಸನ್ನಿವೇಶಗಳ ಕುರಿತು ತಮ್ಮದೇ ಆದ ವಿಶಿಷ್ಟ ಉಡುಗೆ ತೊಡುಗೆಗಳೊಂದಿಗೆ ಚಿತ್ರಿಸಲಾಗಿದೆ.

ಈ ಕಲಾಕೃತಿಗಳ ಮೇಲೆ ಸಮಕಾಲೀನ ಪ್ರಭಾವವೂ ಇರುವುದನ್ನು ಗುರುತಿಸಲಾಗಿದೆ. ದಖ್ಖನ್ ಮೊಘಲ್, ರಜಪೂತ, ಮರಾಠಾ ಕಲಾ ಶೈಲಿಗಳ ಪ್ರಭಾವವಿದ್ದು, ತನ್ನದೇ ಆದ ಸಮಕಾಲೀನ ವೈಶಿಷ್ಟ್ಯಗಳುಳ್ಳ

ಕಲಾಕೃತಿಗಳು ರಚನೆಗೊಂಡಿವೆ. ಒಟ್ಟಿನಲ್ಲಿ ನಿಪ್ಪಾಣಿ ರಾಜವಾಡೆಯ ಭಿತ್ತಿಚಿತ್ರಗಳನ್ನು ಅಧ್ಯಯನಕ್ಕೆ ಒಳಪಡಿಸಿದ್ದು ಇಂತಹ ಒಂದು ಭವ್ಯವಾದ ಶ್ರೀಮಂತ ಕಲಾಕ್ಷೇತ್ರ ಹೊರಗಿನ ಜಗತ್ತಿಗೆ ತಿಳಿಯದೇ ಹೋದದ್ದುನ್ನು ಗುರುತಿಸುವ ಅಲ್ಪ ಪ್ರಯತ್ನವನ್ನು ಇಲ್ಲಿ ಮಾಡಲಾಗಿದೆ. ಹಾಗೂ ನಿಪ್ಪಾಣಿ ವಾಡೆಯ ಭಿತ್ತಿಚಿತ್ರಗಳ ಕಲಾ ಸಂಪತ್ತನ್ನು ರಕ್ಷಿಸುವ ಹೊಣೆಯನ್ನು ಸರಕಾರವು ವಹಿಸಿಕೊಳ್ಳುವದು ಸೂಕ್ತವಾಗಿದೆ. ಖಾಸಗಿ ಒಡೆತನದಲ್ಲಿರುವ ಈ ಕಲಾಸಂಪತ್ತನ್ನು ಕಾಲಗತಿಯಿಂದ ಹಾಳಾಗದಂತೆ ರಕ್ಷಿಸುವ ಕೆಲಸ ಸರ್ಕಾರದ ಮತ್ತು ಅದರ ಒಡೆತನವಿರುವವರು ಮಾಡಬೇಕಾದ ಕರ್ತವ್ಯವಾಗಿದೆ.

# ದರ್ಬಾರ ಹಾಲ್‌ದಲ್ಲಿಯ ಭಿತ್ತಿಚಿತ್ರಗಳು

## I- ಕೃಷ್ಣಲೀಲೆಯ ಸಂಪೂರ್ಣ ಕಲಾಕೃತಿಗಳು





ಭಕ ಪಕ್ಷಿಯನ್ನು ವಧೆ
ಮಾಡಿದ ಶ್ರೀಕೃಷ್ಣ – 34" x 22"

# ದರ್ಬಾರ ಹಾಲ್‌ದಲ್ಲಿಯ ಭಿತ್ತಿಚಿತ್ರಗಳು



ತಪೋನಿರತ ತುಳಜಾಭವಾನಿ - 7" x 22"



ರಾಸಲೀಲೆಯಲ್ಲಿ ತೊಡಗಿರುವ
ಶ್ರೀ ಕೃಷ್ಣ - 8" x 6"



ಎದುರು ನೋಡುತ್ತಿರುವ ರಾಜಕುಮಾರಿ – 8" x 8"

# ದರ್ಭಾರ ಹಾಲ್‌ದಲ್ಲಿಯ ಭಿತ್ತಿಚಿತ್ರಗಳು

ದರ್ಭಾರ ಹಾಲ್‌ದಲ್ಲಿಯ ಭಿತ್ತಿಚಿತ್ರಗಳು



ಸಾಳ್ವ ಪಕ್ಷಿಯೊಂದಿಗಿರುವ
ರಾಜಕುಮಾರಿ – 8" x 8"



ಜಿಂಕೆಗೆ ತಪ್ಪಲು ತಿನಿಸುತ್ತಿರುವ
ರಾಜಕುಮಾರಿ – 8" x 8"

# ದರ್ಭಾರ ಹಾಲ್‌ದಲ್ಲಿಯ ಭಿತ್ತಿಚಿತ್ರಗಳು

ದರ್ಭಾರ ಹಾಲ್‌ದಲ್ಲಿಯ ಭಿತ್ತಿಚಿತ್ರಗಳು



ಇನಿಯನ ನಿರಿಕ್ಷೆಯಲ್ಲಿರುವ
ರಾಧೆ – 8" x 8"



ಇನಿಯನಿಗೆ ಸಂದೇಶ
ಕಳಿಸುತ್ತಿರುವ ರಾಧೆ – 8" x 8"

# ದರ್ಬಾರ ಹಾಲ್‌ದಲ್ಲಿಯ ಭಿತ್ತಿಚಿತ್ರಗಳು

ದರ್ಬಾರ ಹಾಲ್‌ದಲ್ಲಿಯ ಭಿತ್ತಿಚಿತ್ರಗಳು



ಯೋಚನಾ ಮಗ್ನಳಾದ
ರಾಧೆ – 8" x 8"



ನೃತ್ಯ ಭಂಗಿಯಲ್ಲಿರುವ
ರಾಧೆ – 8" x 8"

# ದರ್ಭಾರ ಹಾಲ್‌ದಲ್ಲಿಯ ಭಿತ್ತಿಚಿತ್ರಗಳು

## ಸ್ಥಳೀಯ ಪ್ರಭಾವದ ಚಿತ್ರಗಳು



ಬಿಂಗರಿ ಆಡುಸುತ್ತಿರುವ
ರಾಧೆ – 4" x 5"



ಆರತಿಯೊಂದಿಗೆ ಬರುತ್ತಿರುವ
ರುಕ್ಮಿಣಿ – 4" x 5"

# ದರ್ಬಾರ ಹಾಲ್‌ದಲ್ಲಿಯ ಭಿತ್ತಿಚಿತ್ರಗಳು

## ಸ್ಥಳೀಯ ಪ್ರಭಾವದ ಚಿತ್ರಗಳು



ಯಶೋಧರೆಯೊಂದಿಗೆ
ಬಾಲಕ ಕೃಷ್ಣ - 4" x 5"



ಗೌಳಗಿತ್ತಿಯ
ಕಲಾಕೃತಿ - 4" x 5"

# ದರ್ಬಾರ ಹಾಲ್‌ದಲ್ಲಿಯ ಭಿತ್ತಿಚಿತ್ರಗಳು

## ಸ್ಥಳೀಯ ಪ್ರಭಾವದ ಚಿತ್ರಗಳು



ಹಾಲನ್ನು ಹಿಂಡುತ್ತಿರುವ
ಮಹಿಳೆ – 4" x 5"



ಕಾಯಿಪಲ್ಲೆ ಮಾರುತ್ತಿರುವ
ದೃಶ್ಯ – 4" x 5"



ಮರಾಠಾ ಯೋಧ - 4" x 5"



ಸುಲ್ತಾನ್ ಯೋಧ - 4" x 5"

# ದರ್ಬಾರ ಹಾಲ್‌ದಲ್ಲಿಯ ಭಿತ್ತಿಚಿತ್ರಗಳು

## ಪ್ರಾಂತೀಯ ಸರ್ದಾರ್‌ರು



ರಜಪೂತ ಯೋಧ – 4" x 5"



ಮೊಘಲ್ ಯೋಧ – 4" x 5"

# ದರ್ಬಾರ ಹಾಲ್‌ದಲ್ಲಿಯ ಭಿತ್ತಿಚಿತ್ರಗಳು

## ಪ್ರಾಂತೀಯ ಸರ್ದಾರ್‌ರು



ಮೈಸೂರ ಯೋಧ - 4" x 5"



ದಖ್ಖನ್ ಯೋಧ - 4" x 5"

# ದರ್ಭಾರ ಹಾಲ್‌ದಲ್ಲಿಯ ಭಿತ್ತಿಚಿತ್ರಗಳು

## ಬೇರೆ ಬೇರೆ ರಾಜಕುಮಾರರ ಚಿತ್ರಗಳು



ಮರಾಠಾ ದೊರೆ – $5^{1/2}$" x $5^{1/2}$"



ಬ್ರಿಟೀಷ ರಾಜಕುಮಾರ – $5^{1/2}$" x $5^{1/2}$"

# ದರ್ಭಾರ ಹಾಲ್‌ದಲ್ಲಿಯ ಭಿತ್ತಿಚಿತ್ರಗಳು

## ಬೇರೆ ಬೇರೆ ರಾಜಕುಮಾರರ ಚಿತ್ರಗಳು



ರಜಪೂತ ದೊರೆ – 4" x 5"



ಮೊಘಲ್ ದೊರೆ – $5^{1/2}$" x $5^{1/2}$"

# ದರ್ಭಾರ ಹಾಲ್‌ದಲ್ಲಿಯ ಭಿತ್ತಿಚಿತ್ರಗಳು

## ಬೇರೆ ಬೇರೆ ರಾಜಕುಮಾರರ ಚಿತ್ರಗಳು



ದಖ್ಖನ್ ದೊರೆ – $5^{1/2}$" x $5^{1/2}$"



ಜಪಾನ್ ದೊರೆ – 4" x 5"

## ದರ್ಬಾರ ಹಾಲ್‌ದಲ್ಲಿಯ ಭಿತ್ತಿಚಿತ್ರಗಳು

### ಶಿವಶರಣರು



ಶಿವಭಕ್ತ – 4" x 5"



ಶಿವ ಶರಣೆ – 4" x 5"

# ದರ್ಬಾರ ಹಾಲ್‌ದಲ್ಲಿಯ ಭಿತ್ತಿಚಿತ್ರಗಳು

## ಶಿವಶರಣರು



ವಿಷ್ಣು ಭಕ್ತ – 4" x 5"



ಸಿಕ್ಕರ ಗುರು – 4" x 5"

# ದರ್ಬಾರ ಹಾಲ್‌ದಲ್ಲಿಯ ಭಿತ್ತಿಚಿತ್ರಗಳು



ಗೋಪಾಲಕನೊಂದಿಗೆ ರಾಧೆ ರುಕ್ಮಿಣಿಯರು



ಧ್ಯಾನಸಕ್ತಳಾದ ಪಾರ್ವತಿ – 7" x 22"

# ದರ್ಭಾರ ಹಾಲ್‌ದಲ್ಲಿಯ ಭಿತ್ತಿಚಿತ್ರಗಳು

## ದೇವಾಲಯಗಳು



ಶಿವದೇವಾಲಯ – 4" x 5"



ಆಂಜನೇಯ ದೇವಸ್ಥಾನ – 4" x 5"

# ದರ್ಭಾರ ಹಾಲ್‌ದಲ್ಲಿಯ ಭಿತ್ತಿಚಿತ್ರಗಳು

## ದೇವಾಲಯಗಳು



ತುಳಜಾಭವಾನಿ ದೇವಸ್ಥಾನ - 4" x 5"



ಶ್ರೀಕೃಷ್ಣ ರುಕ್ಮಿಣಿಯರ ಸಂಭಾಷಣೆ - 4" x 5"

# ದರ್ಭಾರ ಹಾಲ್‌ದಲ್ಲಿಯ ಭಿತ್ತಿಚಿತ್ರಗಳು

## ದೇವಾಲಯಗಳು



ಶಿವ ಪಾರ್ವತಿಯರ ಚಿತ್ರ – 7" x 22"



ಮಹಿಷಾಸುರ ಮರ್ಧಿನಿ – $5^{1/2}$" x $5^{1/2}$"

# ದರ್ಬಾರ ಹಾಲ್‌ದಲ್ಲಿಯ ಭಿತ್ತಿಚಿತ್ರಗಳು

IV ದೇವಾಲಯಗಳು





ಹೂಧಾನಿಯೊಂದಿಗೆ ಹಂಸ ಪಕ್ಷಿಗಳು – 34" x 22"

# ದರ್ಬಾರ ಹಾಲ್‌ದಲ್ಲಿಯ ಭಿತ್ತಿಚಿತ್ರಗಳು

## ದೇವಾಲಯಗಳು



ರಾಜಕುಮಾರಿಯೊಂದಿಗೆ
ಮಗು – 5" x 7"



ಸುರಪಾನ ಪ್ರಿಯ
ಅರಸ – 5 x 7"

# ದರ್ಬಾರ ಹಾಲ್‌ದಲ್ಲಿಯ ಭಿತ್ತಿಚಿತ್ರಗಳು



ರುಕ್ಮಿಣಿಗೆ ಪಾರಿಜಾತ ಪುಷ್ಪ
ನೀಡುವ ಶ್ರೀಕೃಷ್ಣ – 5" x 7"



# ಪಹಾರಾ ಹಾಲ್‌ದಲ್ಲಿಯ ಭಿತ್ತಿಚಿತ್ರಗಳು

## ಅರಮನೆಯ ಸಂಪೂರ್ಣ ಚಿತ್ರ



ಅರಮನೆಯ ಕೆಳಅಂತಸ್ತಿನ ಚಿತ್ರ



ರಾಧೆಯೊಂದಿಗೆ
ರಾಸಲೀಲೆಯಲ್ಲಿರುವ ಕೃಷ್ಣ

# ಪಹಾರಾ ಹಾಲ್‌ದಲ್ಲಿಯ ಭಿತ್ತಿಚಿತ್ರಗಳು

ಅರಮನೆಯ ಸಂಪೂರ್ಣ ಚಿತ್ರ



ಅರಮನೆಯ ಮೇಲಂತಸ್ತಿನ ಚಿತ್ರ



ಯುದ್ಧಕ್ಕೆ ಸಿದ್ಧನಾದ ಕೃಷ್ಣನನ್ನು
ಬೀಳ್ಕೊಡುವ ರುಕ್ಮಿಣಿ

# ಪಹಾರಾ ಹಾಲ್‌ದಲ್ಲಿಯ ಭಿತ್ತಿಚಿತ್ರಗಳು

ಅರಮನೆಯ ಸಂಪೂರ್ಣ ಚಿತ್ರ



ಅರಮನೆಯ ಬಯಲು ಗ್ಯಾಲರಿ

ಪ್ರಣಯ ನಿರತ ಕೃಷ್ಣನನ್ನು
ಕಂಡು ವಿಸ್ಮಯಳಾದ ರಾಧೆ





# ಪಹಾರಾ ಹಾಲ್‌ದಲ್ಲಿಯ ಭಿತ್ತಿಚಿತ್ರಗಳು

## ಅರಮನೆಯ ಸಂಪೂರ್ಣ ಚಿತ್ರ



ಅರಮನೆಯ ಮುಂದೆ ಬಣ್ಣದೋಕಳಿ



ವಸಂತೋತ್ಸವ ದೃಶ್ಯ



ಅಧ್ಯಾಯ : ಐದು

# ನಿಪ್ಪಾಣಿವಾಡೆ ಭಿತ್ತಿಚಿತ್ರಗಳ ಕಲಾವಿನ್ಯಾಸ ಮತ್ತು ಪ್ರಮುಖ ಲಕ್ಷಣಗಳು

ಅಧ್ಯಾಯ : ಐದು

# ನಿಪ್ಪಾಣಿವಾಡೆ ಭಿತ್ತಿಚಿತ್ರಗಳ ಕಲಾವಿನ್ಯಾಸ ಮತ್ತು ಪ್ರಮುಖ ಲಕ್ಷಣಗಳು

ಭಾರತದಲ್ಲಿಯ ಚಿತ್ರಕಲಾ ಇತಿಹಾಸವನ್ನು ಸಾಮಾನ್ಯವಾಗಿ ಅಜಂತಾದ ಭಿತ್ತಿಚಿತ್ರಕಲೆಯಿಂದಲೇ ಪ್ರಾರಂಭಿಸುವೆವು. ಕ್ರಿ.ಪೂ.೨ನೆಯ ಶತಮಾನದಿಂದ ಕ್ರಿ.ಶ.೭ನೇ ಶತಮಾನದವರೆಗೆ ಅಂದರೆ ಸುಮಾರು ೮೦೦ ವರ್ಷಗಳ ಕಾಲ ನಿರಂತರವಾಗಿ ರಚನೆಗೊಂಡ ಭಿತ್ತಿಚಿತ್ರಗಳನ್ನು ಶಾತವಾಹನರು, ವಾಕಾಟಕರು, ಚಾಲುಕ್ಯರ ಪ್ರೋತ್ಸಾಹದಿಂದಾಗಿ ಅಜಂತಾದ ಗವಿಗಳು ಭಾರತೀಯ ಚಿತ್ರಕಲೆಯ ದೊಡ್ಡದಾದ ಮತ್ತು ಪವಿತ್ರವಾದ ಪ್ರದರ್ಶನಾಲಯಗಳಾಗಿವೆ. ಇಲ್ಲಿಯ ಚಿತ್ರಗಳು ಅಂದಿನ ಸಾಮಾಜಿಕ, ರಾಜಕೀಯ ಮತ್ತು ಅಧ್ಯಾತ್ಮಿಕ ವಿಷಯಗಳನ್ನೊಳಗೊಂಡು ರಚನೆಗೊಂಡಿದ್ದು, ಬುದ್ಧನ ಜಾತಕ ಮತ್ತು ಜೀವನಕ್ಕೆ ಸಂಬಂಧಿಸಿದವುಗಳಾಗಿವೆ. ನಿರೂಪಣಾ ವಿಷಯ ಚಿತ್ರಗಳಲ್ಲಿಯ ರಚನಾ ತಂತ್ರ ಮತ್ತು ಕಲಾದೃಷ್ಟಿಯಿಂದ ಇವು ಅಮೂಲ್ಯ ಕೃತಿಗಳಾಗಿವೆ.

ಅಜಂತಾ, ಬಾದಾಮಿ, ಸಿತ್ತನಿವಾಸಲ್‌ಗಳ ಭಿತ್ತಿಚಿತ್ರಗಳ ಪರಂಪರೆಯಲ್ಲಿ ಚಿತ್ರಗಳು ದುಂಡುಮುಖಗಳನ್ನು ಅಂಡಾಕಾರದ ಮುಖಗಳನ್ನು ಹೊಂದಿದ್ದು, ಎಲ್ಲೋರಾದ ಭಿತ್ತಿಚಿತ್ರಗಳಲ್ಲಿಯ ಮುಖಗಳು ಕೋನಾತ್ಮಕ ರೂಪಕ್ಕೆ ಬದಲಾವಣೆಗೊಂಡಿವೆ. ಚೂಪಾದ ಮೂಗು, ಗಡ್ಡ, ಮೀಸೆಯನ್ನು ಹೊಂದಿದ ಮುಖಗಳು ಎಲ್ಲೋರಾ ಶೈಲಿಯ ವಿಶಿಷ್ಟ ಲಕ್ಷಣಗಳಾಗಿವೆ. ಅಜಂತಾ ಕಲೆಯಲ್ಲಿ ಮಾನವೀಯತೆಗಳಿಗೆ ಹಾಗೂ ಪ್ರಾಣಿ, ಪಕ್ಷಿ ಮತ್ತು ಅಲಂಕಾರಿಕ ಹೂವು ಗಿಡಗಳಿಗೆ ಪ್ರಾಧಾನ್ಯತೆ ನೀಡಿ ನಿಸರ್ಗಕ್ಕೆ ಹತ್ತಿರವಾದ ಚಿತ್ರಗಳನ್ನು ರಚಿಸಿದರೆ ಎಲ್ಲೋರಾದ ಕಲೆಯು ದೇವಾಧಿ ದೇವತೆಗಳಿಂದ ತುಂಬಿದ್ದು, ಎಲ್ಲೋರಾದ ವಿಶಿಷ್ಠವಾದ ಚಾಚುಕಣ್ಣುಗಳು ಚೂಪಾದ ಮೂಗುಗಳನ್ನು ಹೊಂದಿದ್ದು, ಇಲ್ಲಿನ ಗರುಡ ಮನುಷ್ಯ ರೂಪದಲ್ಲಿರುವ ಮುಖಲಕ್ಷಣವು ವಿಜಯನಗರ ಕಾಲಕ್ಕೆ ಈ ಕಲಾಕೃತಿಯನ್ನು ಸಾಮಾನ್ಯವಾಗಿ ಎಲ್ಲ ಕಡೆ ಬಳಸಿಕೊಳ್ಳಲಾಗಿದೆ.

ರಾಷ್ಟ್ರಕೂಟರ ಎಲ್ಲೋರಾ ಭಿತ್ತಿಚಿತ್ರಗಳ ಪ್ರಭಾವ ಭಾರತದ ಎರಡು ದಿಕ್ಕುಗಳಲ್ಲಿ ಹರಡಿರುವುದನ್ನು ಕಾಣುತ್ತೇವೆ. ದಕ್ಷಿಣದಲ್ಲಿ ಜೈನಧವಳಾ ಗ್ರಂಥಗಳಲ್ಲಿಯ ಚಿತ್ರಗಳ ಮೇಲೆಯೂ ಪ್ರಭಾವವಿರುವುದು ಕಂಡುಬರುತ್ತದೆ. ಡಾ.ವೈ.ಸಿ.ಭಾನುಮತಿಯವರು ಕರ್ನಾಟಕದ ಜೈನಹಸ್ತಪ್ರತಿಗಳಲ್ಲಿ ಚಿತ್ರಕಲೆಯು ತನ್ನ ಉತ್ಕೃಷ್ಟತೆಯನ್ನು ಕಂಡುಕೊಂಡಿದ್ದು, ಹೊಯ್ಸಳರ ಕಾಲದ ಹಸ್ತಪ್ರತಿಗಳಲ್ಲಿ ಕಲಾವಿದರು ಅಂಚುಗಳನ್ನು ರೇಖಾವಿನ್ಯಾಸದಿಂದ ಅಲಂಕರಿಸುತ್ತಿದ್ದು, ಅದನ್ನೇ ಚಿತ್ರಕಲಾ ಮಾಧ್ಯಮವನ್ನಾಗಿ ಉಪಯೋಗಿಸಿ ಹಸ್ತಪ್ರತಿಯ ಮಹತ್ವವನ್ನು ಮೊದಲ ಬಾರಿಗೆ ಹೆಚ್ಚಿಸಿದವರು ಹೊಯ್ಸಳ ಕಲಾವಿದರು ಎಂಬ ಮಾತುಗಳು ಸರಿಯಾದುದೆನಿಸುತ್ತದೆ. ಹೀಗೆ ಇವು ಭಾರತೀಯ ಕಲಾ ಇತಿಹಾಸಕ್ಕೆ "ಕಿರುರೂಪ ಚಿತ್ರಗಳನ್ನು" ಪ್ರಥಮ ಬಾರಿಗೆ ಪರಿಚಯಿಸಿದ ಕೀರ್ತಿ ಜೈನಹಸ್ತಪ್ರತಿಗಳಿಗೆ ಸಲ್ಲುತ್ತದೆ. ಇನ್ನೊಂದೆಡೆ ಪಶ್ಚಿಮಭಾರತದ ಓಲೆಗರಿಗಳು, ಹಸ್ತಪ್ರತಿಗಳು ಭಿತ್ತಿಚಿತ್ರಗಳ ಮೇಲೆ ಅದರಲ್ಲೂ ಗುಜರಾತ ಮತ್ತು ರಾಜಸ್ಥಾನದ ಜೈನಚಿತ್ರಗಳ ಮೇಲೆಯೂ ಎಲ್ಲೋರಾ ಭಿತ್ತಿ ಚಿತ್ರಗಳ ಸಂಪೂರ್ಣವಾದ ಪ್ರಭಾವ ಬಿದ್ದಿದ್ದು ಕಂಡುಬರುತ್ತದೆ.

ವಿಜಯನಗರ ಭಿತ್ತಿಚಿತ್ರಗಳ ಮೇಲೆ ಕರ್ನಾಟಕದ ಕಲಾಪರಂಪರೆಯಲ್ಲಿ ಚಾಲುಕ್ಯರ ರಾಷ್ಟ್ರಕೂಟರ ದಟ್ಟಪ್ರಭಾವದೊಂದಿಗೆ ತಮಿಳುನಾಡು ಆಂದ್ರಪ್ರದೇಶಗಳ ಕಲಾ ಪರಂಪರೆಯು ಸೇರಿಕೊಂಡಿದ್ದು ಕಂಡುಬರುತ್ತದೆ ಎಂದು ಇತಿಹಾಸಕಾರ ಶ್ರೀ ಸಿ.ಶಿವರಾಮ ಮೂರ್ತಿಯವರು ಅಭಿಪ್ರಾಯಪಡುತ್ತಾರೆ. ವಿಜಯನಗರ ಭಿತ್ತಿಚಿತ್ರಗಳಲ್ಲಿ ತಿರುಪತಿಯಲ್ಲಿ ರೂಢಿಗೆ ಬಂದಿದ್ದ ಉದ್ದವಾದ ಕಿರೀಟಗಳಿವೆ. ಸೈನಿಕರು, ಜನರ ಪಗಡಿಗಳು ಗಮನಾರ್ಹವಾಗಿದ್ದು, ರೇಖಾವಿನ್ಯಾಸವುಳ್ಳ ಬಿಂದಿಗಿ, ಉಡುಪುಗಳು ಸಮಕಾಲೀನರು ಧರಿಸುವಂತಹವುಗಳಾಗಿವೆ. ದೇವಕನ್ಯೆಯರ ನಾಟ್ಯವೂ ನರ್ತಕೀಯರ ನೃತ್ಯವೂ ನಿರೂಪಣೆಗೊಂಡಿದೆ. ಅಪ್ಸರೆಯರ ಕೋಲಾಟದ ದೃಶ್ಯ (ಜರತಾರಿ) ಅಂಚಿನ ಸೀರೆಗಳನ್ನು ಕಚ್ಚೆಯಾಗಿ ಉಟ್ಟಿರುವುದು ಮತ್ತು ಪುರುಷರು ಪಂಚೆಕಚ್ಚೆ ಹಾಕಿ ಉಟ್ಟುಕೊಂಡಿರುವ ಧೋತ್ರಗಳು, ಮಹಿಳೆಯರು ತಲೆಗೂದಲನ್ನು ಹಿಕ್ಕಿಕೊಂಡಿದ್ದು, ತುರುಬವನ್ನು (ಬನ್ ಆಕಾರದಲ್ಲಿ) ಕಟ್ಟಿಕೊಳ್ಳುವುದು ಹಾಗೂ ಪುರುಷವೀರರನ್ನು ತಿಳಿಸಲು ಶೌರ್ಯ, ಪರಾಕ್ರಮ, ರೋಷವನ್ನು ಮೀಸೆಯಿಂದ ಸೂಚಿಸಿದೆ. ತುಟಿಯ ಮೇಲಿಂದ ತೀಡಿ ಮೇಲಕ್ಕೆ ಸುರುಳಿ ಸುತ್ತಿರುವ ಮೀಸೆ ಇದೆ. ವಿಜಯನಗರ ಭಿತ್ತಿಚಿತ್ರಗಳಲ್ಲಿ ಈ ವೈಶಿಷ್ಟ್ಯತೆಗಳು ಕಂಡುಬರುತ್ತವೆ. ಒಟ್ಟಾರೆಯಾಗಿ "ಸಮಕಾಲೀನ ವಿಷಯ, ವಸ್ತುಗಳನ್ನು ವಾಸ್ತವಿಕ ನೆಲಗಟ್ಟಿನಲ್ಲಿ ಚಿತ್ರಿಸಿರುವುದು ಕಂಡುಬರುತ್ತದೆ."ಈ ವಿಜಯನಗರ ಕಲೆಯ ಪ್ರಭಾವವು ಪೂರ್ವಕ್ಕೆ ಮಹಾರಾಷ್ಟ್ರ, ಪಶ್ಚಿಮಕ್ಕೆ ಓರಿಸ್ಸಾ ಹಾಗೂ ದಕ್ಷಿಣಕ್ಕೆ ಕನ್ಯಾಕುಮಾರಿಯವರೆಗೂ ಇವರ ರಾಜ್ಯದ ತುಂಬಾ ಹರಡಿಕೊಂಡಿತ್ತು. ಕರ್ನಾಟಕದ ಪರಂಪರೆ ಹಿಂದೂ ಧರ್ಮ ಮತ್ತು ಸಂಸ್ಕೃತಿಯನ್ನು ವಿಜಯನಗರ ಕಲಾಶೈಲಿಯು ದಕ್ಷಿಣ ಭಾರತದಾದ್ಯಂತ ಹರಡಿಕೊಂಡಿರುವುದು ಕಂಡುಬರುತ್ತದೆ. ಸೂಕ್ಷ್ಮತೆ ಮತ್ತು ಅಲಂಕಾರಗಳು ಚಿತ್ರಶಿಲ್ಪ ಮತ್ತು ವಾಸ್ತುಗಳಲ್ಲಿ ಕಂಡುಬಂದವು. ಚಿತ್ರಗಳಲ್ಲಿಯ ರೇಖಾವಿನ್ಯಾಸ, ಸ್ಥಳಾವಕಾಶ, ಹೊಂದಾಣಿಕೆ, ತರಂಗಬದ್ಧತೆಗಳು ಬಂದು ಅತಿಯಾದ

ವಿವರಣೆಗಳಿಗೆ ಪ್ರಾಧಾನ್ಯತೆ ಕೊಡತೊಡಗಿರುವುದರಿಂದಾಗಿ ಚಿತ್ರಕಲೆಯ ಬೆಳವಣಿಗೆ ಕುಂಟಿತವಾಯಿತೆಂದೂ ಆದರೆ ಶಿಲ್ಪ ಮತ್ತು ವಾಸ್ತುಶಿಲ್ಪಗಳ ಪರಂಪರೆ ಕಡಿದು ಹೋಗಲಿಲ್ಲವೆಂದೂ ಡಾ.ಶಿವರಾಮ ಕಾರಂತರು "ಕರ್ನಾಟಕದ ಚಿತ್ರಕಲೆ"ಯಲ್ಲಿ ಚರ್ಚಿಸಿದ್ದಾರೆ.[೧] ಆದರೆ ಈವರೆಗೂ ಬಂದ ಕಲಾ ಅಧ್ಯಯನಗಳ ಅವಲೋಕನೆಯ ಹಿನ್ನೆಲೆಯಲ್ಲಿ ಈ ಮಾತನ್ನು ಚಿತ್ರಕಲೆಗೆ ಸಂಬಂಧಿಸಿದಂತೆ ಒಪ್ಪಿಕೊಳ್ಳುವುದು ಕಷ್ಟವಾಗುತ್ತದೆ. ಯಾಕೆಂದರೆ ಕಲೆಯಲ್ಲಿ "ಸೂಕ್ಷ್ಮತೆ ಮತ್ತು ಅಲಂಕಾರಗಳು ಚಿತ್ರಗಳಲ್ಲಿಯ ರೇಖಾ ವಿನ್ಯಾಸ, ಆಕಾರ, ಆಕೃತಿ, ಸ್ಥಳಾವಕಾಶ, ಹೊಂದಾಣಿಕೆ, ತರಂಗಬದ್ಧತೆಗಳು ಕಲೆಯಲ್ಲಿನ ಪ್ರಯೋಗಗಳಿಂದಾಗಿ ಹುಟ್ಟಿಕೊಂಡ ನವ್ಯ ಆಲೋಚನೆಗಳಾಗಿವೆ. ವಿಜಯನಗರ ಕಲೆಯಲ್ಲಿ ಚಿತ್ರ, ಶಿಲ್ಪ ಮತ್ತು ವಸ್ತುಗಳಲ್ಲಿಯ ಪರಂಪರೆ ಕಡಿದುಹೋಗಲಿಲ್ಲ. ವಿಜಯನಗರ ದೊರೆಗಳ ಕಾಲದಲ್ಲಿ ಹೊಸಪರಂಪರೆಯೊಂದಿಗೆ ಹೊಸ ಜೀವನವನ್ನು ಪಡೆದುಕೊಂಡವು. ಆದರೆ ಇವರ ಕಾಲದ ಕಲೆಯಲ್ಲಿ ಸ್ಥಳೀಯ ಪ್ರಭಾವಗಳನ್ನು ಅಳವಡಿಸಿರುವುದರಿಂದ ವಿಜಯನಗರ ಕಲಾಶೈಲಿಯಲ್ಲಿ ಅಲ್ಪಸ್ವಲ್ಪ ವ್ಯತ್ಯಾಸಗಳನ್ನು ಕಾಣಬಹುದಾಗಿದೆ. ಕಾರಣ ವಿಜಯನಗರ ಸಾಮ್ರಾಜ್ಯವು ಇಡೀ ದಕ್ಷಿಣ ಭಾರತವನ್ನೆಲ್ಲ ಆಕ್ರಮಿಸಿದ್ದು, ಸ್ಥಳೀಯ ಪ್ರಭಾವಗಳು ಕಲೆಯಲ್ಲಿ ಸೇರಿಕೊಂಡಿರುವುದರಿಂದಾಗಿ, ಅಲ್ಪಸ್ವಲ್ಪ ವ್ಯತ್ಯಾಸಗಳು ಕಂಡುಬರುವುದು ಸ್ವಾಭಾವಿಕವಾಗಿದೆ. ಅನಂತರ ಬಂದ ಸುಲ್ತಾನರ ಪರ್ಷಿಯನ್ ಮತ್ತು ಟರ್ಕಿ ಕಲಾಶೈಲಿಯ ಅಂಶಗಳನ್ನು ವಿಜಯನಗರ ಭಿತ್ತಿ ಚಿತ್ರಗಳೊಂದಿಗೆ ಬೆರೆತು ದಖ್ಖನ್ ಶಿಷ್ಟಪದ ಕಿರುರೂಪ ಚಿತ್ರಗಳಾಗಿ ಬೆಳೆದು ಬಂದವು. ಸೂಕ್ಷ್ಮವಾಗಿ, ಅಲಂಕಾರಿಕವಾಗಿ ಸಣ್ಣ ಸಣ್ಣ ಪಟ್ಟಿಕೆಗಳನ್ನು ಮಾಡಿಕೊಂಡು ಭಿತ್ತಿಯಲ್ಲಿ ಚಿತ್ರಿಸುವ ವಿಧಾನವನ್ನು ಪರಿಚಯಿಸಿದ್ದು ಕಂಡುಬರುತ್ತದೆ. ವಿಜಯನಗರ ಕಲಾಶೈಲಿಯೊಂದಿಗೆ ಪರ್ಷಿಯನ್ ಕಲೆಯ ಅಂಶಗಳೂ ಸೇರಿಕೊಂಡು ರಚನೆಯಾಗಿದ್ದು, ಅತ್ಯಂತ ಜನಪ್ರಿಯವಾಗಿ ಬೆಳೆದು ಬಂದವು. ದಖ್ಖನ್ ಕಿರುರೂಪಚಿತ್ರಗಳು ಹಸ್ತಪ್ರತಿಗಳಲ್ಲಿಯೇ ಹೆಚ್ಚಾಗಿ ಬೆಳೆದು ಬಂದಿದ್ದು ಕಂಡು ಬರುತ್ತದೆ. ಈ ದಖ್ಖನ್ ಕಿರುರೂಪಚಿತ್ರಗಳಲ್ಲಿ "ಸಂಗೀತ, ಕಾವ್ಯ ಮತ್ತು ಚಿತ್ರಗಳ ಸಂಗಮವಾಗಿ ರಚನೆಗೊಂಡ ರಾಗಮಾಲಾ ಚಿತ್ರಗಳು" ಭಾರತೀಯ ಕಲಾಇತಿಹಾಸದಲ್ಲಿ ಹೊಸ ಪರಂಪರೆಯನ್ನು (ಪ್ರಥಮ ಬಾರಿಗೆ)ಹುಟ್ಟು ಹಾಕಿದ ಶ್ರೇಯಸ್ಸು ದಖ್ಖನ್ ಅರಸರಿಗೆ ಸಲ್ಲುತ್ತದೆ.[೨]

ಆಕಾರದಲ್ಲಿ ಚಿಕ್ಕದಾಗಿಯೂ ಸೂಕ್ಷ್ಮವಾಗಿರುವ ಈ ದಖ್ಖನ್ ಚಿತ್ರಗಳು. ದಖ್ಖನ್ ವಾಸ್ತುಶಿಲ್ಪದ ಹಿನ್ನೆಲೆಯನ್ನು ಹೊಂದಿದ್ದು, ಒಂದು ಪಕ್ಕಕ್ಕೆ ತಿರುಗಿದಂತಿರುವ ಮಾನವಾಕೃತಿಗಳು, ಗಂಡಸರು ಉದ್ದನೆಯ ನಿಲುವಂಗಿ, ಕಿರಿದಾದ ಪೇಠ ಧರಿಸಿದ್ದು, ಉದ್ದನೆಯ ಶಂಖುವಿನ ಆಕಾರದ ಟೋಪಿ ಧರಿಸಿದ್ದು ಕಂಡುಬಂದರೆ, ಹೆಣ್ಣುಮಕ್ಕಳು ಮೇಲುಡುಗೆಯಾಗಿ ರವಿಕೆ ಹಾಕಿಕೊಂಡಿದ್ದಾರೆ. ಸೀರೆಯಸೆರಗು ತೀರ

---

೧. ಡಾ.ಶಿವರಾಮ ಕಾರಂತರು: "ಕರ್ನಾಟಕದಲ್ಲಿ ಚಿತ್ರಕಲೆ", ಪು.೪೫

೨. ಶ್ರೀ ಬಿ.ಎಂ.ಪಾಟೀಲ: "ಕರ್ನಾಟಕದ ಕಿರುರೂಪ ಚಿತ್ರಗಳು", (ಅಪ್ರಕಟಿತ ಲೇಖನ) ಪು.೯.

ಉದ್ದವಾಗಿದ್ದು, ತಲೆಯ ಮೇಲೆ ಸೆರಗು ಹಾಕಿಕೊಂಡಿದ್ದು, ಕೈಗಳಲ್ಲಿ ಪದರು ಪದರುಗಳಾಗಿ ಹಿಡಿದುಕೊಂಡಿದ್ದಾರೆ. ಕಲಾವಿದ ಸೀರೆಯನ್ನು ದೇಹಕ್ಕೆ ಸುತ್ತಿರುವ ರೀತಿ ನೋಡಿದರೆ, ಸೀರೆಯನ್ನು ಚಿತ್ರಿಸಲು ಗೊಂದಲಗೊಂಡಿರುವಂತೆ ಕಂಡುಬರುತ್ತದೆ. ಕಾರಣ ಭಾರತೀಯರ ಚಿತ್ರಣಗಳ್ಲಲಿ ಸೀರೆಯ ಚಿತ್ರಣದ ಆರಂಭಕಾಲವೂ ಬಹುಶಃ ಇದೇ ಆಗಿದೆ. ಸ್ತ್ರೀಯರು ತಲೆಗೂದಲುಗಳನ್ನು ಬಾಚಿಕೊಂಡು ಜಡೆಯಂತೆ ಹೆಣೆದುಕೊಳ್ಳಲಾಗಿದ್ದು, ಇನ್ನೂ ಕೆಲವರು ತುರುಬು ಕಟ್ಟಿಕೊಂಡಿದ್ದಾರೆ. ಈ ಎಲ್ಲ ವೇಷಭೂಷಣ ಪಾರದರ್ಶಕ ಉಡುಗೆ ತೊಡುಗೆಗಳು ದಖ್ಖನ್ ಸಂಸ್ಕೃತಿಯನ್ನು ಬಿಂಬಿಸುತ್ತವೆ. ದಕ್ಷಿಣ ಭಾರತದ ಅಭಿರುಚಿ ಪೂರ್ಣಕೃತಿಗಳು ಮತ್ತು ಸಜೀವವೆಂಬಂತೆ ತೋರುವ ಮೇಲ್ಮೈ ಅಲಂಕಾರ ವರ್ಣಚಿತ್ರದ ವಸ್ತುವಿಶಿಷ್ಠವಾಗಿದ್ದುದು ಕಂಡುಬರುತ್ತದೆ. ಈ ದಖ್ಖನ್ ಚಿತ್ರಗಳ ಪ್ರಭಾವ ಕರ್ನಾಟಕದಾದ್ಯಂತ ಹರಡಿಕೊಂಡಿದ್ದು ಅದರಲ್ಲೂ ಉತ್ತರ ಕರ್ನಾಟಕದಲ್ಲಿ ದಖ್ಖನ್ ಕಲೆಯ ದಟ್ಟ ಪ್ರಭಾವದೊಂದಿಗೆ ಮರಾಠಾ ಕಲೆ, ಸುರಪೂರ ಕಲೆ ಹಾಗೂ ನಿಪ್ಪಾಣಿಯ ಭಿತ್ತಿಚಿತ್ರಗಳು ಬೆಳೆದು ಬಂದಿದ್ದು ಕಂಡುಬರುತ್ತವೆ. ಇವುಗಳಷ್ಟೇ ಅಲ್ಲದೇ ಮಹಾಲಿಂಗಪೂರ, ಬಿ.ಕೆ.ಹಳ್ಳಿ, ಅಮ್ಮಿನಭಾವಿ, ನರಗುಂದ ಸವಣೂರಿನ ಭಿತ್ತಿ ಚಿತ್ರಗಳಲ್ಲಿಯೂ ವಿಜಯನಗರ ಮತ್ತು ದಖ್ಖನ್ ಶೈಲಿಗಳ ಮಿಶ್ರಣದೊಂದಿಗೆ ರಚನೆಗೊಂಡಿರುವುದನ್ನು ಕಾಣುತ್ತೇವೆ.[೩]

ದಖ್ಖನ್ ಕಲೆಯ ದಟ್ಟಪ್ರಭಾವದೊಂದಿಗೆ ಮರಾಠಾ ಕಲೆ, ನಿಪ್ಪಾಣಿಕಲೆ ಹಾಗೂ ಸುರಪೂರಕಲೆಗಳು ಬೆಳೆದು ಬಂದಿವೆ.

**ನಿಪ್ಪಾಣಿ ಭಿತ್ತಿಚಿತ್ರಗಳ ಮೇಲಾದ ಪ್ರಭಾವಗಳು:**

ಚಿತ್ರದಲ್ಲಿ "ಶೈಲಿ" ಎಂದರೆ ಸಾಮಾನ್ಯವಾಗಿ ಚಿತ್ರರಚನಾ ಕೌಶಲ್ಯವೆಂತಲೂ ಸಚಿತ್ರ ಆಕಾರಗಳನ್ನು ರೇಖೆ ಹಾಗೂ ವರ್ಣಗಳಿಂದ ಹೊರಹೊಮ್ಮಿಸಲು ಬಳಸುವ ತಂತ್ರವೆಂತಲೂ ಹೇಳಬಹುದು. "ಪರಂಪರೆ ಹಾಗೂ ಧಾರ್ಮಿಕ, ರಾಜಕೀಯ, ಸಾಮಾಜಿಕ ಸ್ಥಿತಿಗತಿಗಳ ಸಮಗ್ರ ಸಮ್ಮಿಲನದ ಪರಿಣಾಮವೇ ಶೈಲಿಯಾಗಿದೆ ಎನ್ನಬಹುದು." ಮನೋವಿಜ್ಞಾನ ಬೆಳೆದಂತೆ ಮಕ್ಕಳಚಿತ್ರಕಲೆ ಹಾಗೂ ಆದಿಮಾನವರ ಕಲೆಗಳ ವಿಶ್ಲೇಷಣೆಯ ಫಲವಾಗಿ ಸಾವಿರಾರು ವರ್ಷಗಳಿಂದ ಬಂದಿದ್ದ ಆಗಮಶಾಸ್ತ್ರಗಳಲ್ಲಿ ಕಲೆಯನ್ನು ಕುರಿತು ನಿರೂಪಿತವಾಗಿದ್ದ ತತ್ವಸಿದ್ಧಾಂತಗಳು ಪರಿಕಲ್ಪನೆಗಳು ಬುಡಮೇಲಾಗಿವೆ. ಇದರ ಫಲವಾಗಿ ಎಲ್ಲ ದೇಶಗಳ ಜನಾಂಗದ ಶಿಷ್ಠಪದ, ಜಾನಪದ, ಆದಿವಾಸಿಗಳ ಕಲೆಗಳಿಗೆ ಅನ್ವಯವಾಗುವ ಪ್ರಯತ್ನ ಸಾಗಿದ್ದು, ನಾಗರಿಕ ಪರಂಪರೆಗೂ ಭಿನ್ನವಾದ ಕಲೆಗಳಿಗೂ ಗೌರವ ಇಂದು ಮೂಡಿದೆ. ಜೊತೆಗೆ ಕಲೆಯನ್ನು ನೋಡುವ ಪ್ರವೃತ್ತಿಯೂ ಬದಲಾಗಿದೆ.

---

೩. ಶ್ರೀ ಬಿ.ಎಂ.ಪಾಟೀಲ: "ಕರ್ನಾಟಕದ ಕಿರುರೂಪಚಿತ್ರಗಳು", ಪು.೨೦.

ಚಿತ್ರಕಲೆಯ ಪರಿಶೀಲನೆಯಲ್ಲಿ ಕಾಲದ ದೃಷ್ಟಿಯಿಂದ ವಿಂಗಡಿಸುವುದು ಅನುಕೂಲಕ್ಕಾಗಿ ಮಾತ್ರ ಪರಂಪರೆ, ಪರಸ್ಪರ ಪ್ರೇರಣೆ, ಪ್ರಭಾವಗಳು ಇವೆಲ್ಲದರ ಹಿಂದಿರುವ ಒಳಸೂತ್ರಗಳು ಬಹುಶಃ ಒಂದೇ ಆಗಿದೆ. ಕರ್ನಾಟಕದ ನಿಪ್ಪಾಣಿವಾಡೆ ಭಿತ್ತಿಚಿತ್ರಗಳ ಪರಂಪರೆಯೂ ಇದಕ್ಕೆ ಹೊರತಾದುದಲ್ಲ ಅಂತಹ ತಿರುವುಗಳನ್ನು ಗುರುತಿಸುವ ಪ್ರಯತ್ನ ಪ್ರಸ್ತುತ ಅಧ್ಯಯನದ ಉದ್ದೇಶವಾಗಿದೆ.

ನಿಪ್ಪಾಣಿವಾಡೆ ಭಿತ್ತಿಚಿತ್ರಗಳ ಕಲಾವಿನ್ಯಾಸವನ್ನು ಅಧ್ಯಯನದ ದೃಷ್ಟಿಯಿಂದ ಪ್ರಮುಖವಾಗಿ ಮೂರು ಭಾಗಗಳನ್ನಾಗಿ ವಿಂಗಡಿಸಿಕೊಂಡು ಅಧ್ಯಯನ ಮಾಡಲಾಗಿದೆ.

೧. ಶೈವ ಸಂಪ್ರದಾಯದ ಭಿತ್ತಿ ಚಿತ್ರಗಳು

೨. ವೈಷ್ಣವ ಸಂಪ್ರದಾಯದ ಭಿತ್ತಿ ಚಿತ್ರಗಳು

೩. ಪರ್ಷಿಯನ್ ಸಂಪ್ರದಾಯದ ಭಿತ್ತಿ ಚಿತ್ರಗಳು

ಹಿಂದೂಧರ್ಮವು ದ್ರಾವಿಡ ಹಾಗೂ ಆರ್ಯ ಸಂಸ್ಕೃತಿಗಳ ಬೆಸುಗೆಯ ಫಲವಾಗಿದೆ. ಶಿವ ಮತ್ತು ವಿಷ್ಣು ಪ್ರಮುಖರಾದರು. ದ್ರಾವಿಡ ಮೂಲ ದೇವತೆ ಶಿವನೆಂದೂ, ಶೈವ ಸಂಪ್ರದಾಯದ ನಾಯಕನೆಂದೂ ಆರ್ಯರ ಮೂಲದೇವತೆ ವಿಷ್ಣುವೆಂದು, ವೈಷ್ಣವ ಸಂಪ್ರದಾಯದ ನಾಯಕನೆಂದೂ ಹೀಗೆ ಗುರುತಿಸಲಾಗಿದ್ದು, ಆರ್ಯರು ಪ್ರಾಕೃತಿಕ ಶಕ್ತಿಯ ದೇವತೆಗಳನ್ನು ಮೂರ್ತಿಕರಿಸಿ ಪೂಜಿಸುತ್ತಿದ್ದರು. ಉದಾ– ಇಂದ್ರ, ವಾಯು, ವರುಣ, ಅಗ್ನಿ ಹೀಗೆ ದೇವತೆಗಳನ್ನು ಮಾಡಿಕೊಂಡಿದ್ದರು. ದ್ರಾವಿಡರು ತಮ್ಮ ದೇವತೆಗಳನ್ನು ಮೂರ್ತಿಕರಿಸಿದ್ದು. ಶಿವ, ಪಾರ್ವತಿ, ಚಾಮುಂಡಿ, ಸರಸ್ವತಿ, ಗೌರಿ, ಗಣೇಶ ಹೀಗೆ ದೇವತೆಗಳನ್ನು ಮಾಡಿಕೊಂಡು ಪೂಜಿಸತೊಡಗಿದರು. ಹೀಗೆ ತಮ್ಮದೇ ಆದ ಪ್ರತ್ಯೇಕ ಭಕ್ತಿ ಪಂಥಗಳು ಹುಟ್ಟಿಕೊಂಡವು.

ಹೀಗೆ ಭಾರತೀಯ ಚಿತ್ರಕಲೆಯ ವೈಶಿಷ್ಟ್ಯವು ಧಾರ್ಮಿಕ ಹಿನ್ನೆಲೆಯಲ್ಲಿ ರೂಪುಗೊಂಡಿತು. ಈ ಕಾಲದವರು ತಮಗಿಷ್ಟವಾದ ದೇವಾಧಿ ದೇವತೆಗಳ ಚಿತ್ರಗಳನ್ನೇ ಪ್ರಸ್ತಾಪಿಸಿರುವರು ಆ ಕಾಲದಲ್ಲಿ ವೈಷ್ಣವ ಪಂಥದವರಿಗೆ ಶ್ರೀಕೃಷ್ಣ ರಾಧೆಯರು, ಶೈವರಿಗೆ ಶಿವಪಾರ್ವತಿಯರು ಇವರ ಸುತ್ತಲೂ ನಲಿದಾಡುವಂತೆ ಆಗಿದ್ದು ಭಕ್ತಿಮಾರ್ಗದಲ್ಲಿ ಅದು ಹೆಚ್ಚಾಗಿ "ಮಧುರ ಭಾವದ" ಹಾದಿಯನ್ನು ಹಿಡಿಯುವದು. ಮಧುರ ಭಾವವೆಂದರೆ ದೇವನು ತನ್ನ ಪತಿಯೆಂದು ತಿಳಿದು ತೋರುವ ಭಕ್ತಿಯೇ ಆಗಿದೆ. ಈ ಕಲೆಯ ಅಧಿದೇವಿಯೇ "ರಾಧೆ"ಯೆನ್ನಬಹುದು. ರಾಧಾಕೃಷ್ಣರ ಪ್ರೇಮವೆಂದರೆ ಪರಮಾತ್ಮನ ಕಡೆಗೋಡುವ ಆತ್ಮದ ಪ್ರೇಮವಾಗಿದೆ. ಇದರಂತೆ ಶಿವಪಾರ್ವತಿಯವರ ಪ್ರೇಮಲಹರಿಯೂ ಇದೇ ಆಗಿದೆ. ಇಂತಹ ಭಕ್ತಿಭಾವದ ಅನೇಕ ಸ್ವರೂಪಗಳನ್ನು ವಿವಿಧ ಬಗೆಗಳಲ್ಲಿ ಬರೆದು ತನ್ನಂತರಂಗದಲ್ಲಿರುವ ಭಕ್ತಿಯನ್ನು ಉಕ್ಕಿಸುವ ಕಲಾವಿದ ಆತ್ಮ ಪರಮಾತ್ಮರ ಪರಸ್ಪರ ಪ್ರೇಮ ಪರಿಚಯ ಸಾಮಿಪ್ಯಾಕಾಂಕ್ಷೆ ವಿರಹ, ಮಿಲನ, ವಿಯೋಗ, ಸಂಯೋಗ ಇವಕ್ಕೆಲ್ಲಾ ಶೃಂಗಾರವೆಂದು ಹೆಸರು. "ಶೃಂಗಾರವೆಂದರೆ ಪ್ಯಾರೀಸ್ ಚಿತ್ರಗಳ ಶೃಂಗಾರವಲ್ಲ ಮನಸ್ಸನ್ನು, ಬುದ್ಧಿಯನ್ನು ಹಾಗೂ ಆತ್ಮವನ್ನು ಕಾಮದಿಂದ ಕಲುಷಿತವನ್ನಾಗಿ ಮಾಡುವ

ಶೃಂಗಾರವಲ್ಲಿ. ಶೃಂಗಾರದ ಜೀವಾಳವು ಕಾಮದಲ್ಲಿಲ್ಲ ಅದು ಪ್ರೇಮದಲ್ಲಿದೆ". ವ್ಯಭಿಚಾರಿಣಿಯಾದವಳು ಜಗದ ನಿಂದನೆಯನ್ನು ತನ್ನ ಕಾಮದ ಸಲುವಾಗಿ ಅಲಕ್ಷಿಸುವಂತೆ ನಾನು ನಿನ್ನ ಸಲುವಾಗಿ ಇಷ್ಟೆಲ್ಲಾ ನಿಂದೆಯನ್ನು ಸಹಿಸಿದೆ ಎಂದು ವೈಷ್ಣವ ಕವಿಯೊಬ್ಬರು ಹೇಳಿರುವುದನ್ನು ಉಲ್ಲೇಕಿಸಿದ ಶಿವರಾಮ ಕಾರಂತರು ಹೀಗೆ ಗೋಪಿಕಾಸ್ತ್ರೀಯರ ಶೃಂಗಾರದ ಮರ್ಮವಾಗಿದ್ದು ಇದನ್ನು ನಾವು ಅರಿತುಕೊಂಡೆವೆಂದರೆ ಮುಂದೆ ಶೃಂಗಾರವೊಂದರಲ್ಲಿಯೇ ಚಿತ್ರಕಾರನು ಬಗೆಬಗೆಯ ಸವಿಗಳನ್ನುಣ್ಣಲು ಹೇಗೆ ಶಕ್ತನಾಗುವನು ಎಂಬುದನ್ನು ಅರಿಯಬಹುದಾಗಿದೆ ಎಂದಿರುವರು.[೪]

ಭಾರತೀಯ ಕಿರುರೂಪಚಿತ್ರಗಳಲ್ಲಿ ಶೃಂಗಾರದ ವಿವಿಧ ಮುಖಗಳನ್ನು ಸಮರ್ಥವಾಗಿ ಪರಿಚಯಿಸಿದ್ದು, ಅದರಲ್ಲೂ ರಜಪೂತ ಕಲೆಯಲ್ಲಿ ಶೃಂಗಾರ ರಸವು ಉತ್ಕೃಷ್ಟ ಮಟ್ಟವನ್ನು ತಲುಪಿತ್ತು. ಈ ಕಲೆಗಳ ರಚನೆಯ ಮೂಲವು ಅಜಂತಾದ ಕಲೆಯಲ್ಲಿದೆಯೆಂಬುದು ನಿರ್ವಿವಾದವಾದುದು. ಮುಖ್ಯವಾಗಿ ರೇಖಾಬಲವು ಅಜಂತಾದ ಪರಂಪರೆಯನ್ನು ಸಾರುತ್ತವೆ. ಈ ಕಿರುರೂಪ ಚಿತ್ರಗಳನ್ನು ವಿಶಾಲೀಕರಿಸಿದರೆ ಅಜಂತಾದ ರೇಖೆಗಳ ಜೀವವೇ ಇಲ್ಲಿಯೂ ಕಾಣುತ್ತೇವೆ. ಈ ಚಿಕ್ಕ ಚಿತ್ರಗಳನ್ನು ಮುಂದೆ ಗೋಡೆಗಳ ಮೇಲೆ ದೊಡ್ಡದು ಮಾಡಿ ಬರೆಯುವದಕ್ಕಾಗಿಯೇ ಆರಂಭದಲ್ಲಿ ತಯಾರಿಸಿದರೆಂದೂ ಡಾ.ಆನಂದ ಕುಮಾರಸ್ವಾಮಿ ಅವರು ಹೇಳಿರುವರು. ಇಂತಹ ಪ್ರಯೋಗಗಳು ಉದಯಪುರ, ಜಯಪೂರ, ಬಿಕಾನೇರ್ ಮುಂತಾದ ಅರಮನೆಗಳಲ್ಲಿಯು ಭಿತ್ತಿಚಿತ್ರಗಳನ್ನು ರಚಿಸಿದ್ದು, ಈಗಲೂ ಕಾಣಬಹುದಾಗಿದೆ ಎಂದು ಡಾ.ಆನಂದಕುಮಾರಸ್ವಾಮಿ ಹಾಗೂ ಇತಿಹಾಸಕಾರ ಪರ್ಷಿಬ್ರೌನ್‌ರು ಎಂದಿರುವರು.[೫] ಶೃಂಗಾರ ರಸವಿರುವ ಕಿರುರೂಪಚಿತ್ರಗಳು ಭಿತ್ತಿಚಿತ್ರಗಳ ಪೂರ್ವತಯಾರಿಚಿತ್ರಗಳು ಎನ್ನುವ ಅಂಶವನ್ನು ತಕ್ಕಮಟ್ಟಿಗೆ ಒಪ್ಪಿಕೊಳ್ಳಲೇ ಬೇಕಾಗುತ್ತದೆ. ಆದರೂ ಈ ಕಿರುರೂಪಚಿತ್ರಗಳು ಸ್ವತಂತ್ರವಾಗಿದ್ದು, ಅವುಗಳು ತಮ್ಮದೇ ಆದ ಸೂಕ್ಷ್ಮತೆ ಅಲಂಕಾರಿಕತೆಗಳೊಂದಿಗೆ ಶೃಂಗಾರ ರಸವನ್ನು ಉನ್ನತಮಟ್ಟಕ್ಕೆ ತಂದ ಕಿರುರೂಪಚಿತ್ರಗಳಾಗಿವೆ ಹಾಗೂ ಜಗತ್ತಿನ ರಸಿಕರನ್ನು ಭಾರತದತ್ತ ಕಣ್ಣು ತೆರಸುವಂತೆ ಮಾಡಿವೆ ಎಂಬುದೂ ಅಷ್ಟೇ ಸತ್ಯವಾದುದು. "ಈ ಕಲಾಕೃತಿಗಳು ಭಿತ್ತಿಚಿತ್ರಗಳ ಪೂರ್ವ ತಯಾರಿ ಚಿತ್ರಗಳೂ ಅಲ್ಲ, ಅತ್ತ ಗ್ರಂಥಸ್ಥ ಚಿತ್ರಗಳಿಗೆ ಮಾತ್ರ ಸೀಮಿತ ಅನ್ನುವ ವಾದವನ್ನೂ ಒಪ್ಪಲು ಆಗದು. ಈ ಕಿರುರೂಪ ಚಿತ್ರಗಳು ತಮ್ಮದೇ ಆದಂತಹ ಅಂಶಗಳೊಂದಿಗೆ, ಭಾವನಾತ್ಮಕ ಅಂಶಗಳನ್ನು ಕಲ್ಪನಾ ವಿಲಾಸದಲ್ಲಿ ಶೃಂಗಾರ ರಸದೊಂದಿಗೆ ಹರಿಬಿಟ್ಟ ವಿಶಿಷ್ಟ ಕಲಾಕೃತಿಗಳಾಗಿವೆ ಎಂಬುದು ಐತಿಹಾಸಿಕ ಸತ್ಯವಾಗಿದೆ. ಆದರೆ ಈ ಕಿರುರೂಪಚಿತ್ರಗಳು ಭಿತ್ತಿಚಿತ್ರಗಳಿಂದಲೇ ಪ್ರೇರಣೆಗೊಂಡಿದ್ದು ಮತ್ತೆ ಬಿತ್ತಿಚಿತ್ರಗಳಲ್ಲಿ ಹೊಸ ಪರಂಪರೆಯನ್ನು ಹಾಕಲು ಕಾರಣೀಭೂತವಾಗಿವೆ ಎಂಬುದನ್ನು ಗಮನಿಸಬೇಕಾದುದು ಈಗ ಮಹತ್ವವಾದುದಾಗಿದೆ.

---

೪. ಡಾ.ಶಿವರಾಮ ಕಾರಂತರು: ಭಾರತೇಯ ಚಿತ್ರಕಲೆ, ಪು.೬೦.

೫. ಡಾ.ಶಿವರಾಮ ಕಾರಂತರು: ಭಾರತೇಯ ಚಿತ್ರಕಲೆ, ಪು.೫೫.

ಉದಯಪೂರ, ಜಯಪೂರ, ಬಿಕಾನೇರ್, ಅರಮನೆಗಳಲ್ಲಿಯ ಭಿತ್ತಿಯಲ್ಲಿ ದೊಡ್ಡದಾಗಿ ಈ "ಕಿರುರೂಪಚಿತ್ರಗಳು" ರೂಪಗೊಂಡಿದ್ದು, ದಖ್ಖನ್ ಪ್ರದೇಶದ ಉತ್ತರಭಾಗದಲ್ಲಿರುವ ಬೆಳಗಾಂವ್ ಜಿಲ್ಲೆಯ ನಿಪ್ಪಣಿ ಸಂಸ್ಥಾನದ "ನಿಂಬಾಳಕರ್ ವಾಡೆ ಭಿತ್ತಿಯಲ್ಲಿ ಕಿರುರೂಪ ಚಿತ್ರಗಳಾಗಿಯೇ ಮೂಡಿ ಬಂದಿರುವುದು ೧೮ನೇ ಶತಮಾನದ ಪ್ರಾರಂಭದಲ್ಲಿ ಎಂಬುದು ಮಹತ್ವಪೂರ್ಣವಾದ ವಿಷಯವಾಗಿದೆ." ಅತ್ಯಂತ ಚಿಕ್ಕದಾದ ೩"x೩" ಹಾಗೂ ೪"x೩" ಅಳತೆಯ ಕಿರುರೂಪಚಿತ್ರಗಳು "ಪಹಾರಾ ಹಾಲ್" ದ ಭಿತ್ತಿಯಲ್ಲಿ ಚಿತ್ರಿಸಲಾಗಿದೆ. ಈ ಕಿರುರೂಪ ಚಿತ್ರಗಳು ಈವರೆಗೆ ತಾಳೆಗರಿ ಪೇಪರ್‌ಗಳಿಗೆ ಸೀಮಿತವಾಗಿದ್ದು ಈ ಸೂಕ್ಷ್ಮಪ್ರಮಾಣದ ಕಿರುರೂಪ ಚಿತ್ರಗಳು, ನಿಪ್ಪಾಣಿವಾಡೆ ಭಿತ್ತಿಯಲ್ಲಿ ಕಂಗೊಳಿಸುತ್ತವೆ.

ದಖ್ಖನ್, ಮರಾಠಾ, ಮೋಘಲ್ ಮತ್ತು ರಜಪೂತ ಕಲೆಗಳ ಪ್ರಭಾವದೊಂದಿಗೆ ಬೆಳೆದು ಬಂದ ನಿಪ್ಪಾಣಿ ವಾಡೆ ಭಿತ್ತಿಚಿತ್ರಗಳಿಗೆ ದಖ್ಖನ್ ಸುಲ್ತಾನರ ಆಡಳಿತ ದಖ್ಖನ್‌ನಲ್ಲಿ ಕೊನೆಗೊಂಡ ನಂತರ ಮರಾಠರ ಆಶ್ರಯದಲ್ಲಿ ಕಿರುರೂಪಚಿತ್ರಗಳು ಮುಂದುವರದಿದ್ದು. ಮರಾಠಾದೊರೆ ಪೇಶ್ವೆ ಅವರು ಉತ್ತರಭಾರತದಲ್ಲಿ ಯುದ್ಧಕೈಗೊಂಡು ಗುಜರಾಥ್, ರಾಜಸ್ಥಾನ ಪ್ರದೇಶಗಳಲ್ಲಿ ಅಧಿಕಾರ ಸ್ಥಾಪಿಸಿದ ನಂತರ, ಅಲ್ಲಿಯ ಕಲಾವಿದರನ್ನು ಆಮಂತ್ರಿಸಿ ಆಶ್ರಯ ನೀಡಿದರು. ಮುಂಬೈ, ಪುಣಾ ಸಾತಾರ್, ನಾಸಿಕ್, ಸಾಂಗ್ಲಿ, ಕೊಲ್ಲಾಪುರ ಮುಂತಾದ ನಗರಗಳು ಈ ಕಲೆಯ ಕೇಂದ್ರಗಳಾದವು. ಮರಾಠರ ಕಾಲದ, ಕಿರುರೂಪ ಚಿತ್ರಗಳಿಗೆ ಪೌರಾಣಿಕ ಕಥೆಗಳಾದ ರಾಮಾಯಣ, ಮಹಾಭಾರತ, ಕೃಷ್ಣಲೀಲೆ, ವಿಷ್ಣುಕಥಾ ಚಿತ್ರಗಳು ವಸ್ತುವಾದವು. ಪುನಾದ ಭಾರತ ಇತಿಹಾಸ ಸಂಶೋಧಕ ಮಂಡಳ ಸಂಸ್ಥೆಯ ಸಂಗ್ರಹದಲ್ಲಿ ೧೨೦೦ ಕ್ಕೂ ಹೆಚ್ಚು ಚಿತ್ರಗಳಿವೆ. ಅವುಗಳಲ್ಲಿ ನೂರಕ್ಕೂ ಹೆಚ್ಚು ಮರಾಠಾ ಚಿತ್ರಗಳಿವೆ.[೬]

**ಮರಾಠಾಭಿತ್ತಿ ಚಿತ್ರಕಲೆ:**

ಅಜಂತಾ ಎಲ್ಲೋರಾ ಬದಾಮಿ ಮುಂತಾದ ಸ್ಥಳಗಳು ಪ್ರಾಚೀನ ಕಾಲದ ಭಿತ್ತಿಚಿತ್ರಕಲೆಗೆ ಮೂಲವಾಗಿವೆ, ದಖ್ಖನ್‌ದಲ್ಲಿ ಭಿತ್ತಿಚಿತ್ರಕಲೆ ಹೆಚ್ಚು ಜನಪ್ರಿಯವಾಗಿತ್ತು. ಮರಾಠರ ರಾಜ್ಯ ಉದಯದೊಂದಿಗೆ ಭಿತ್ತಿಚಿತ್ರಕಲೆ ಮತ್ತೇ ಹೊಸರೂಪ ಪಡೆಯಿತು. ಮರಾಠಾ ಅರಸರು ತಾವು ನಿರ್ಮಿಸಿದ ಅರಮನೆ, ವಾಡೆ ಮತ್ತು ದೇವಾಲಯಗಳ ಗೋಡೆಗಳನ್ನು ಭಿತ್ತಿಚಿತ್ರಗಳಿಂದ ಅಲಂಕಾರಗೊಳಿಸಿದ್ದಾರೆ. ಮರಾಠಾ ಅರಸರು ಪೇಶ್ವೆ ಅವರು ಉನ್ನತ ಅಧಿಕಾರಿಗಳು ವಾಸಿಸುವ ಅರಮನೆ ಗೋಡೆಗಳ ಮೇಲೆ ಸುಂದರವಾದ ಚಿತ್ರಗಳನ್ನು ಬರೆಸಿರುವುದು ಇಂದಿಗೂ ಕಾಣಬಹುದಾಗಿದೆ. ಭಿತ್ತಿಚಿತ್ರಗಳನ್ನು ಪುಣೆಯ ಬಾರಮತಿಕರ್ ವಾಡಾ, ಬೇಲ್ಭಾಗ ಮಂದಿರ, ಶನಡೆ ವಾಡಾ, ಶನಿವಾರ ವಾಡಾ, ನಾನಾ ವಾಡಾ, ಸಾತರದ ಪುರಾನಾ ವಾಡಾ, ನಯವಾಡಾ, ಕೋಲ್ಹಾಪೂರದ ಪಂಥಪ್ರತಿನಿಧಿವಾಡಾ: ವಾಹಿಯ ಮೋತಿಭಾಗ್ ದೇವ ಕುಲೆ ಜೋಷ

೬. ಶ್ರೀ. ಯಶವಂತರಾವ್ ಚವ್ಹಾಣ: "ನಿಪ್ಪಾಣಿ ದರ್ಶನ", ಪು.೨೪.

ವಾಡಾ, ಪಟವರ್ಧನ ವಾಡಾ, ನಿಪ್ಪಾಣಿಯ (ನಿಂಬಾಳಕರ್) ನಿಪನ್‌ಕರ್ ದೇಸಾಯಿ ವಾಡಾ[೭] ಇತ್ಯಾದಿ ಭಿತ್ತಿಚಿತ್ರಗಳು ಕಂಡುಬರುತ್ತವೆ.

**ಮರಾಠಾ ಚಿತ್ರಕಲೆಯ ವೈಶಿಷ್ಟ್ಯ:**

ಮರಾಠಾ ಚಿತ್ರಕಲೆಯು ದಖನಿ ಚಿತ್ರಕಲೆಯ ಪರಂಪರೆಯಲ್ಲಿ ವಿಶಿಷ್ಟವಾದಸ್ಥಾನ ಪಡೆದಿದೆ.

೧. ಭಾರತೀಯ ಧಾರ್ಮಿಕ ಕಥಾ ವಸ್ತುಗಳನ್ನು ಆಧರಿಸಿದ ಚಿತ್ರಗಳು ರಚನೆಗೊಂಡವು.

೨. ಆಕೃತಿಗಳು ಪ್ರಮಾಣಬದ್ಧವಾಗಿಲ್ಲ ಈ ಕಾರಣಕ್ಕಾಗಿಯೇ ಮರಾಠಾ ಕಲೆಯನ್ನು ವಿದ್ವಾಂಸರು ಗಂಭೀರವಾಗಿ ತೆಗೆದುಕೊಂಡಿಲ್ಲ.

೩. ಆಕೃತಿಗಳು ಪಾರ್ಶ್ವಮುಖಶೈಲಿಯವು ಆಗಿದ್ದು, ಸಾಂಕೇತಿಕವಾಗಿವೆ.

೪. ಎತ್ತರವಾದ ಹಣೆ, ಚೂಪಾದ ಮೂಗು, ದಪ್ಪದಾದ ತುಟಿ, ಆಗಲವಾದ ಮುಖ, ನೀಳವಾದ ಕೇಶ, ಅಗಲವಾದ ಎದೆ ಸ್ತ್ರೀಪುರುಷರ ಆಕೃತಿಗಳ ಲಕ್ಷಣಗಳು

೫. ಸ್ತ್ರೀಯರನ್ನು ವಿವಿಧ ಭಗೆಯ ಆಭರಣ, ಕೇಶಾಲಂಕಾರ, ಮೂಗಿನ ನತ್ತು, ಉದ್ದನೆಯ ಸೀರೆ ಇತ್ಯಾದಿಗಳಿಂದ ವಿಭಿನ್ನವಾಗಿ ಚಿತ್ರಿಸಿರುವರು.

೬. ಬಾಹ್ಯರೇಖೆಗಳನ್ನು ದಪ್ಪದಾಗಿ ಹಾಕಿದ್ದು ತೆಳುವಾದ ವರ್ಣಗಳನ್ನು ಬಳಸಲಾಗಿದೆ.

೭. ಮರಾಠರ ಚಿತ್ರಗಳಲ್ಲಿ ಗುಜರಾತ, ರಾಜಸ್ಥಾನಿ, ದಖ್ಖನ್ ಶೈಲಿಗಳ ಪ್ರಭಾವವಿರುವುದು ಕಂಡುಬರುತ್ತದೆ.

೮. ಈ ಚಿತ್ರಗಳಲ್ಲಿ ಅರಸರು ಸರ್ಧಾರರು ಉದ್ದನೆಯ ನಿಲುವಂಗಿ ಹಾಗೂ ಬಿಗಿಯಾದ ಪೈಜಾಮ್ ಧರಿಸಿದ್ದರೆ ಸಾಮಾನ್ಯರು ಸಾಂಪ್ರದಾಯಿಕ ಕೆಂಪುಅಂಚಿನ ಧೋತ್ರ ಭುಜದ ಮೇಲೆ ಅಂಗವಸ್ತ್ರಧರಿಸಿರುವರು ತಲೆಗೆ ಧರಿಸಿದ ಪೇಟ ಪೂನಾ ಪಗಡಿ ಮಾದರಿಯಲ್ಲಿದೆ. ಆಭರಣ ವರ್ಣಗಳ ಸಂಯೋಜನೆ ಇತ್ಯಾದಿ ಪ್ರಭಾವ ಮರಾಠಾ ಕಲೆಯಲ್ಲಿ ಕಂಡುಬರುತ್ತದೆ. ಅಲ್ಲದೇ ಈ ಪ್ರಭಾವವು ನೆರೆಯ ಸಂಸ್ಥಾನಗಳಾದ ನಿಪ್ಪಾಣಿ, ಸುರಪೂರ, ಗಡವಾಲ, ವನಪರ್ತಿ, ಹೈದರಾಬಾದ[೮] ಇತ್ಯಾದಿ ಚಿತ್ರಕಲೆಯ ಮೇಲೆಯೂ ಆಗಿರುವುದು ಕಂಡುಬರುತ್ತದೆ.

ಮೋಘಲ್ ಕಲೆ ನೈಜತೆಗೆ ಹೆಸರುವಾಸಿ ಆದರೆ ದಖ್ಖನ್ ಚಿತ್ರಕಲೆ ಭಾವನಾತ್ಮಕ ವಿಷಯಗಳಿಗೆ ಹೆಸರುವಾಸಿಯಾಗಿದೆ. ರಜಪೂತ ಚಿತ್ರಗಳು ಉಡುಗೆಗಳಲ್ಲಿಯೂ ವಿವಿಧತೆ ಕಂಡುಬರುತ್ತದೆ. ರಜಪೂತ ಶೈಲಿಯ ಚಿತ್ರಗಳಲ್ಲಿ ಸ್ತ್ರೀಯರು ಉದ್ದನೆಯ ಗಗ್ಗರಾ (ಓಡಣಿ) ದುಪ್ಪಟ್ಟಾ ಮತ್ತು ಕುಪ್ಪಸ ಧರಿಸಿರುವರು. ಈ ಸ್ತ್ರೀಯರು ಧರಿಸಿರುವ ಅಭರಣಗಳು ಉದ್ದನೆಯ ಕಿವಿಯೋಲೆ ಕೊರಳಲ್ಲಿ ಮುತ್ತಿನಹಾರ, ಕಂಠಸರ ಇತ್ಯಾದಿ ಸುಲ್ತಾನ್ ಹಾಗೂ ಮೊಘಲ್ ಕಲೆಯಲ್ಲಿ ಬಿಗಿಯಾದ ಪೈಜಾಮ್ ಮೇಲೆ ಕುಪ್ಪಸ ಪಾರದರ್ಶಕ

---

೭. ಶ್ರೀ. ಎಸ್.ಕೆ.ಅರುಣಿ: "ದಖನಿ ಚಿತ್ರಕಲೆ", ಪು.೮೭.

೮. ಶ್ರೀ. ಎಸ್.ಕೆ.ಅರುಣಿ: "ದಖನಿ ಚಿತ್ರಕಲೆ", ಪು.೯೧.

ಗಗ್ಗರಾ ಮತ್ತು ದುಪ್ಪಟ್ಟಾ ಧರಿಸಿರುವರು. ಮರಾಠರ ಚಿತ್ರಗಳಲ್ಲಿ ಸೀರೆ ಕಚ್ಚೆಯನ್ನು ಹಾಕಿಕೊಂಡಿರುವರು. ಚಿತ್ರಗಳಲ್ಲಿ ಮೋಘಲ್ ಮತ್ತು ರಜಪೂತರ ವಾಸ್ತುಶೈಲಿಯ ಗುಮ್ಮಟ ಹಾಗೂ ಇಳಿಜಾರಿನ ಸಜ್ಜದಿಂದ ಕೂಡಿದ್ದು ಜಾಲಂದರಗಳಿರುವ ಕಿಡಕಿಗಳು, ಕಾರಂಜಿಗಳು, ಉದ್ಯಾನವನಗಳು ಕಂಡುಬರುತ್ತವೆ. *ಮೋಘಲ್ ಹಾಗೂ ರಜಪೂತ ಚಿತ್ರಗಳು ಮೇಲುನೋಟಕ್ಕೆ ಒಂದೇ ರೀತಿಯ ಕಿರುರೂಪಚಿತ್ರಗಳಾಗಿ ಕಂಡುಬರುತ್ತಿದ್ದರೂ ವಿಷಯ ಭಾವ, ಗತಿ ಈ ಎಲ್ಲವೂ ಒಂದೇ ಆಗಿಲ್ಲ ಬೇರೆ ಬೇರೆ ಆಗಿವೆ ಎಂದು ಇತಿಹಾಸಕಾರ ಪರ್ಷಿಬ್ರೌನ್ ಹೇಳುತ್ತಾರೆ. *ಮೋಘಲ್ ಚಿತ್ರಕಲೆಯು ಅರಮನೆಯ ಸ್ವತ್ತಾದರೆ ರಜಪೂತ ಕಲೆಯು ಜನಸಮುದಾಯದ್ದೆಂದು ಹೇಳುತ್ತಾ ಮೋಘಲ್ ಚಿತ್ರಕಲೆಯು ಕೇವಲ ರಾಜವಂಶಿಕ ಚಿತ್ರಗಳನ್ನು ರಚಿಸಿದರೆ, ರಜಪೂತ ಕಲೆಯು ಧಾರ್ಮಿಕವಾದ ಮನೋಭಾವನೆ ಕಲ್ಪನಾ ವಿಷಯಕ್ಕೆ ಸಂಬಂಧಿಸಿದ್ದೆಂದು ಡಾ.ಆನಂದ ಕುಮಾರ ಸ್ವಾಮಿ ಹೇಳಿರುವರು. ಎಲ್ಲ ವಸ್ತು ವಿಷಯ ಮತ್ತು ತಂತ್ರಗಳನ್ನು ಆಗಲೇ ಅಧ್ಯಯನ ಮಾಡಿದಂತೆ ಕಂಡುಬರುವ ನಿಪ್ಪಾಣಿಯ ಕಲಾವಿದರು ತಮ್ಮದೇ ಆದ ವಿಶಿಷ್ಟ ಶೈಲಿಯಿಂದ ಶ್ರೀಮಂತಗೊಳಿಸಿಕೊಂಡರು. ನಿಪ್ಪಾಣಿ ಭಿತ್ತಿಚಿತ್ರಕಲೆಯ ಮೇಲೆ ವಿಶೇಷವಾಗಿ ಪರಿಣಾಮ ಬೀರಿದ್ದು, ರಜಪೂತ ಕಿರುರೂಪ ಚಿತ್ರಗಳು ಇದಕ್ಕೆ ಕಾರಣವೆನೆಂದರೆ ನಿಪ್ಪಾಣಿವಾಡೆ ಭಿತ್ತಿಚಿತ್ರಗಳ ನಿರ್ಮಾತೃ ಶ್ರೀ ಸಿದ್ಧೋಜಿರಾವ್ ನಿಂಬಾಳಕರ್ ದೇಸಾಯಿಯವರ ಮೂಲವು ಉತ್ತರ ಹಿಂದೂಸ್ಥಾನದಲ್ಲಿರುವ *ಉಜ್ಜಯನಿಯ ವಿಕ್ರಮಾದಿತ್ಯನ ಮನೆತನವಾಗಿದ್ದುದು ಒಂದೆಡೆಯಾದರೆ ಗ್ವಾಲಿಯಾರ್‌ನ ಸಿಂಧೆ ಅವರೊಂದಿಗಿನ ಉತ್ತಮ ಸಂಬಂಧವನ್ನು ಹೊಂದಿರುವುದರಿಂದ ಮೇಲಿಂದ ಮೇಲೆ ಅಲ್ಲಿಗೆ ಹೋಗಿ ಬರುತ್ತಿರುವುದರಿಂದಲೂ ಅಲ್ಲಿ ಬೆಳೆದು ಬಂದ "ಅಜ್ಮೀರ್ ಕಲಮ್" ರಾಜಸ್ಥಾನಿ ಕಲೆಯನ್ನು ತನ್ನ ರಾಜವಾಡೆಯಲ್ಲಿಯೂ ಚಿತ್ರಿಸಲು ಪ್ರೋತ್ಸಾಹಿಸಿರುವ ಸಾಧ್ಯತೆ ಕಂಡುಬರುತ್ತದೆ. ಅಷ್ಟೇ ಅಲ್ಲದೆ ಅಲ್ಲಿಯ ಕಲಾವಿದರನ್ನು ಕರೆತಂದಿರುವ ಸಾಧ್ಯತೆಗಳೂ ಉಂಟು ಯಾಕೆಂದರೆ ದರ್ಭಾರ್ ಹಾಲ್‌ದಲ್ಲಿಯ ರಾಜಕುಮಾರಿಯರ ಚಿತ್ರಗಳು ರಜಪೂತ ಕಲೆಯ ತದ್ರೂಪವೇ ಆಗಿವೆ. ರಜಪೂತ ಕಲೆಯು ಬಿಕಾನೇರ್‌ದಿಂದ ಗುಜರಾತಿನ ಸರಹದ್ದಿನವರೆಗೂ ಜೋದ್‌ಪುರದಿಂದ ಗ್ವಾಲಿಯರ್ ಉಜ್ಜಯನಿಯವರೆಗೂ ಹರಡಿರುವ ಪ್ರದೇಶಕ್ಕೆ ಅನ್ವಯಿಸುತ್ತದೆ. ಈ ರಾಜಸ್ಥಾನಿ ಕಲೆಗೆ "ಅಜ್ಮೀರ್ ಕಲಮ್" ಎನ್ನುವರು. ಇನ್ನೊಂದು "ಕಾಂಗ್ರಾ ಕಲಮ್" ಎಂದು ಇದ್ದು, ಇವೆರಡೂ ಭಾಗಗಳು ರಜಪೂತ ಕಲೆಯಲ್ಲಿ ಪ್ರಮುಖವಾದವುಗಳಾಗಿವೆ.

ರಜಪೂತ ಚಿತ್ರಗಳಲ್ಲಿ ಭಾವನೆಗಳಿಗೆ ತಕ್ಕಂತೆ ವರ್ಣವನ್ನು ಬಳಸಲಾಗಿದೆ. ಉಜ್ವಲವರ್ಣಗಳು, ಲಲಿತರೇಖೆಗಳು, ಉಡುಗೆಯಲ್ಲಿಯ ರೇಖೆಗಳು, ನಕ್ಷೆಗಳು, ಅಲಂಕಾರಿಕವಾಗಿ ಚಿತ್ರಿಸಿದ ರಚನೆಗಳು, ಚಿತ್ರದ ವಿನ್ಯಾಸ, ವಿಷಯದ ಆಯ್ಕೆ, ದೇವರನ್ನು ಮತ್ತು ಮಾನವರನ್ನು ಸಮಾವೇಶಗೊಳಿಸಿದ್ದು, ದೇವತೆಗಳನ್ನು ಜನಸಾಮಾನ್ಯರ ಮಟ್ಟಕ್ಕೆ ಇಳಿಸಿ, ಅವರೊಂದಿಗೆ ಓಡಾಡುವುದನ್ನು ಚಿತ್ರಿಸಿದ ರಜಪೂತ ಕಲಾವಿದರು. ಶ್ರೀಕೃಷ್ಣ ರಾಧೆಯರ ಶೃಂಗಾರದ ಸನ್ನಿವೇಶಗಳು, ಪ್ರಣಯ, ವಿರಹ, ಪ್ರೇಮಗಳ ತಾಕಲಾಟಗಳು. ಹೆಣ್ಣನ್ನು

ಲಲಿತ ಕಾವ್ಯವಾಗಿ ಸೃಷ್ಟಿಸಿದ್ದು, ರಾಗಮಾಲಾ ಚಿತ್ರಗಳನ್ನು ಸಂಗೀತ, ಕಾವ್ಯ, ಚಿತ್ರಗಳ ಸಂಗಮವಾಗಿ ರೂಪಿಸಿರುವುದು ಚಿತ್ರಕಲಾ ಪ್ರಪಂಚಕ್ಕೆ ಒಂದು ಹೊಸದಾದ ಮತ್ತು ವಿಶಿಷ್ಠವಾದ ಬೆಲೆಯನ್ನು ತಂದು ಕೊಟ್ಟಿರುವರು. ಈ ಮೌಲ್ಯಗಳನ್ನು ಅರಗಿಸಿಕೊಂಡ ನಿಪ್ಪಾಣಿಯ ಕಲಾವಿದರು ವಾಡೆಯ ಭಿತ್ತಿಯಲ್ಲಿ ಚಿತ್ರಗಳನ್ನು ರಚಿಸಿದು, ವೈವಿಧ್ಯಮಯವಾಗಿ ಮೂಡಿಬಂದಿದೆ.

ಶೈವ, ವೈಷ್ಣವ, ಧರ್ಮಗಳಿಗೆ ಸಂಬಂಧಿಸಿದ ಚಿತ್ರಗಳು ಕೃಷ್ಣ ಮತ್ತು ಗೋಪಿಕಾ ಸ್ತ್ರೀಯರು, ರಾಜಕುಮಾರಿಯರು, (ಜಾನಪದ) ಸ್ಥಳೀಯ ಪ್ರಭಾವದ ಚಿತ್ರಗಳು, ಯೂಧರ ಚಿತ್ರಗಳು, ದೇಶ ವಿದೇಶಗಳ ರಾಜಕುಮಾರರು, ಶಿವಶರಣರು, ಸಂತರು, ದೇವಾಲಯಗಳು, ಕ್ರೀಡೆ ಅರಮನೆಯ ದೃಶ್ಯ ಹೀಗೆ ಹತ್ತಾರು ವಿಷಯಗಳೊಂದಿಗೆ ದಿನನಿತ್ಯದ ಕೆಲಸಗಳ ಕುರಿತು ದನಕಾಯುವರು, ಹಾಲನ್ನು ಕರೆಯುವದು, ಮಾರಾಟಕ್ಕೆ ಕಾಯಿಪಲ್ಲೆ ಹೊತ್ತುಕೊಂಡು ಹೋಗುವುದು. ಹಾಲು ಮೊಸರನ್ನು ಮಾರಾಟಕ್ಕೆ ಒಯ್ಯುವುದು. ಹೀಗೆ ಹತ್ತಾರು ಮುಖಗಳಿಂದ ಚಿತ್ರಗಳನ್ನು ರಚಿಸಿರುವುದು ಕಂಡು ಬರುತ್ತದೆ. ಇವೆಲ್ಲ "ದರ್ಭಾರ ಹಾಲನ್ನು ರಂಗಮಹಲ್ ಆಗಿ ಪರಿವರ್ತಿಸಿದರೆ ಪಹಾರಾ ಹಾಲನ್ನು ಮಲಗುವ ಕೋಣೆಯಾಗಿ ಮಾರ್ಪಡಿಸಿದ ಭಿತ್ತಿ ಚಿತ್ರಗಳು" ಶ್ರೀಕೃಷ್ಣ ರಾಧೆಯರು ಹಾಗೂ ಗೋಪಿಕಾಸ್ತ್ರೀಯರ ಶೃಂಗಾರ ಸನ್ನಿವೇಶಗಳು, ಪ್ರಣಯ, ವಿರಹ, ಪ್ರೇಮಗಳ ತಾಕಲಾಟ, ಆಶೆ, ನಿರಾಸೆ, ಕುತೂಹಲಗಳ ಸಂಗಮವಾಗಿ ಚಿತ್ರಿಸಿದ್ದು, ರಜಪೂತ ಕಲಾವಿದರು ಉತ್ತರಭಾರತದಲ್ಲಿ ಶೃಂಗಾರಮಯವಾಗಿ ಸೃಷ್ಟಿಸಿದ ಸನ್ನಿವೇಶಗಳ ನೆನಪನ್ನು ಹುಟ್ಟಿಸುವವು. ಸೂಕ್ಷ್ಮಪ್ರಮಾಣದ ಉಜ್ವಲವರ್ಣಗಳೊಂದಿಗೆ ಅಲಂಕಾರಿಕವಾಗಿ ಮೂಡಿಬಂದ ನಿಪ್ಪಾಣಿವಾಡೆ ಭಿತ್ತಿಚಿತ್ರಗಳು, ಪೇಪರನಲ್ಲಿ ಬಿಡಿಸಿರಬಹುದಾದಷ್ಟು ಸೂಕ್ಷ್ಮಪ್ರಮಾಣದ ಚಿತ್ರಗಳು ಆಕಾರ, ಗಾತ್ರ, ಪ್ರಮಾಣಗಳೊಂದಿಗೆ ಭಾವನೆಗಳನ್ನು ಹೊರಸೂಸುವ ಈ ಚಿತ್ರಗಳು ಭಿತ್ತಿಯಲ್ಲಿ ರಚಿಸಿರುವುದು ಹಾಗೂ ಕಿರುರೂಪಚಿತ್ರಗಳಾಗಿ ಮೂಡಿಬಂದಿರುವುದು ನಿಜಕ್ಕೂ ಆಶ್ಚರ್ಯಕರವಾಗಿದೆ. ಕಲಾವಿದರ ಪರಿಶ್ರಮ, ಚಾಣಾಕ್ಷತನ, ಸಂಯೋಜನಾ ವಿನ್ಯಾಸ, ಸ್ಥಳಾವಕಾಶದ ವಿಂಗಡನೆ, ವರ್ಣಗಳ ಹೊಂದಾಣಿಕೆ, ಉಜ್ವಲತೆಗಳೊಂದಿಗೆ ಕಲಾವಿದನ ತಾಳ್ಮೆಯನ್ನು ಅಳೆಯಲು ಸಾಧ್ಯವಾಗದಷ್ಟು ಈ ಭಿತ್ತಿಚಿತ್ರಗಳು ಉತ್ಕೃಷ್ಟವಾಗಿ ಮೂಡಿಬಂದಿವೆ.

**ನಿಪ್ಪಾಣಿವಾಡೆ ಶಿಷ್ಟಪದ ಭಿತ್ತಿಚಿತ್ರಗಳು:**

* ನಿಪ್ಪಾಣಿವಾಡೆ ಭಿತ್ತಿಚಿತ್ರಗಳ ಆಕಾರಗಳು ಚಪ್ಪಟೆಯಾಗಿದ್ದು, ದುಂಡುತನದ ಪ್ರಯತ್ನವನ್ನು ನೆರಳು ಬೆಳಕಿನ ವಿನ್ಯಾಸದಲ್ಲಿ ಮಾಡಲಾಗಿದೆ. ತೆಳ್ಳನೆ ದೇಹಾಕೃತಿ ಸಣ್ಣನಡು, ಆಕರ್ಷಕವಾದ ಭಂಗಿಗಳು ಉಜ್ವಲವರ್ಣಗಳ ಬಳಕೆ, ವರ್ಣಗಳ ವೈವಿಧ್ಯತೆ, ಪರಸ್ಪರ ಹೊಂದಾಣಿಕೆ, ಸಂಯೋಜನೆಯಲ್ಲಿ ಕಲಾವಿದ ಉತ್ತಮವಾಗಿ ದುಡಿಸಿಕೊಂಡಿದ್ದಾನೆ.
* ಮಾನವಾಕೃತಿಗಳಲ್ಲಿನ ದೇಹದ ರಚನೆಯಲ್ಲಿ ತೋಳುಗಳು, ಕೈ, ಹಸ್ತ, ಮುಖ, ಎದೆ, ಸ್ಥನ, ನಡು ಹಾಗೂ ಬೆರಳುಗಳಲ್ಲಿರುವ ಲಾಲಿತ್ಯವಾಗಲಿ ಮತ್ತು ಮುಖದಲ್ಲಿಯ ಭಾವನೆಗಳು ಅರೆದೆರೆದ ಕಣ್ಣುಗಳು

ಭಾವನಾತ್ಮಕ ಅಂಶಗಳು ಅಜಂತಾ ಭಿತ್ತಿಚಿತ್ರಗಳ ಹಾಗೂ ರಜಪೂತ ಕಿರುರೂಪಚಿತ್ರಗಳನ್ನು ನೆನಪಿಗೆ ತರುತ್ತವೆ.

* ಈ ಕಲಾಕೃತಿಯಲ್ಲಿನ ದೇಹರಚನೆಯಲ್ಲಿ ತೋರಿಸಲಾದ ಉತ್ಕೃಷ್ಟತೆ ಪ್ರಮಾಣ ಬದ್ಧತೆ, ಸೃಜನಾತ್ಮಕತೆ, ರೇಖಾ ಲಾಲಿತ್ಯಗಳು, ಸೂಕ್ಷ್ಮವಾದ ರಮ್ಯವಾದ ಶೃಂಗಾರ ಭರಿತ ನಯನಾಜೂಕಾದ ಚಿತ್ರಗಳು ಇಲ್ಲಿ ರೂಪುಗೊಂಡಿವೆ.
* ನಿಪ್ಪಾಣಿ ಭಿತ್ತಿಚಿತ್ರಗಳಲ್ಲಿ ಅತ್ಯಂತ ಸೂಕ್ಷ್ಮವಾದ ಕಿರುರೂಪಚಿತ್ರಗಳನ್ನು ಭಿತ್ತಿಯಲ್ಲಿ ಚಿತ್ರಿಸಿದ ರೀತಿ ಭಾರತೀಯ ಪರಂಪರೆಯ ವಸ್ತು ವಿಷಯ  ಶೈಲಿ, ತಂತ್ರ, ವಿಧಾನಗಳಲ್ಲಿ ಇದು ಶುದ್ಧ ಭಾರತೀಯ ಕಲೆ ಆಗಿ ಬೆಳೆದು ಬಂದಿದ್ದು, ಬಣ್ಣಗಳ ಬಳಕೆ, ರೇಖಾ ವಿನ್ಯಾಸ, ಆಕೃತಿಗಳ ಮುಖಲಕ್ಷಣಗಳು ಈ ಕೃತಿಗಳಲ್ಲಿ ಬರುವ ಯಥಾದರ್ಶನದ ಕಲ್ಪನೆ ಅಜಂತಾ, ಎಲ್ಲೋರಾ, ಭಿತ್ತಿಚಿತ್ರಗಳು ಮತ್ತು ರಜಪೂತ ಕಿರುರೂಪಚಿತ್ರಕಲಾ ಶೈಲಿಯ ಪರಂಪರೆಯನ್ನು ಮುಂದುವರೆಸಿರುವುದು ಕಂಡುಬರುತ್ತದೆ.
* ನಿಪ್ಪಾಣಿಯ ವಾಡೆ ಭಿತ್ತಿಚಿತ್ರ ರಚನಾ ಅವಕಾಶವನ್ನು ಆಯತ, ಚೌರಸ ತ್ರಿಕೋನಗಳಲ್ಲಿ ಚಿತ್ರರಚನಾ ಕಾರ್ಯದಲ್ಲಿ ಚಿತ್ರಗಳ ಸಂಯೋಜನೆ ವರ್ಣವಿನ್ಯಾಸ ಈ ಎಲ್ಲಾ ಅಂಶಗಳು ಪೂರ್ವನಿಯೋಜಿತವಾಗಿವೆ ಎಂದು ಹೇಳಬಹುದು. ಚಿತ್ರರಚನೆಗೆ ಮೊದಲು ಚಿತ್ರವಿನ್ಯಾಸದ ಚೌಕಟ್ಟನ್ನು ಹಾಕಿಕೊಂಡು ವಿಷಯ ವ್ಯಾಪ್ತಿಗೆ ಸರಿಹೊಂದುವಂತೆ ಆಕೃತಿಗಳನ್ನು ದುಡಿಸಿಕೊಂಡಿದ್ದಾರೆ.
* ದರ್ಬಾರ್ ಹಾಲ್‌ದಲ್ಲಿಯ ಭಿತ್ತಿಚಿತ್ರಗಳನ್ನು ದೊಡ್ಡಮಾಡುಗಳು, ಚಿಕ್ಕ ಮಾಡುಗಳು, ಉದ್ದವಾದ ಮಾಡುಗಳು, ಅಡ್ಡದಾದ ಮಾಡುಗಳು, ತ್ರಿಕೋನಾಕಾರದ ಮಾಡುಗಳು ಹೀಗೆ ವಿವಿಧ ಆಕಾರಗಳಲ್ಲಿ ರಚಿಸಿದ್ದು, ಮಾಡಿನ ಮಧ್ಯದಲ್ಲಿ ಸಮತಟ್ಟಾದ ಭಿತ್ತಿಯನ್ನು ಮಾಡಿಕೊಂಡು ಮತ್ತೆ ಇವುಗಳಲ್ಲಿ ಚೌರಸ, ಅಯತಾಕಾರದ ಪಟ್ಟಿಕೆಗಳನ್ನು ಮಾಡಿಕೊಂಡು ಚಿತ್ರಿಸಿದ್ದು ವೈಶಿಷ್ಟ್ಯಪೂರ್ಣವಾಗಿದೆ.
* ಪಹಾರಾಹಾಲ್‌ದಲ್ಲಿಯ ಭಿತ್ತಿಚಿತ್ರಗಳನ್ನು ಸಮತಟ್ಟಾದ ದೊಡ್ಡದಾದ ಅಂದರೆ ೮'x೧೦' ಘೂಟ ಅಳತೆಯ ಭಿತ್ತಿ ಹಾಗೂ ೬'x೮' ಘೂಟ ಅಳತೆಯ ಭಿತ್ತಿಯನ್ನು ಸಿದ್ಧಪಡಿಸಿಕೊಂಡು ಅದರಲ್ಲಿ ಆಯತ ಮತ್ತು ಚೌರಸದ ಆಕಾರದ ಪಟ್ಟಿಕೆಗಳನ್ನು ಕ್ರಮವಾಗಿ ದೊಡ್ಡದು ಸಣ್ಣದು ಮತ್ತೆ ದೊಡ್ಡದು ಸಣ್ಣದಾಗಿ ರಚಿಸಿಕೊಂಡು ಆಯಾ ಸ್ಥಾನಗಳಿಗೆ ಹೊಂದುವಂತೆ ಚಿತ್ರಗಳನ್ನು ಸಂಯೋಜಿಸಿದ್ದು ಅರ್ಥಪೂರ್ಣವಾಗಿ ಮೂಡಿಬಂದಿದೆ.
* ಪ್ರತಿಯೊಂದು ಚಿತ್ರಕ್ಕೂ ಪ್ರತ್ಯೇಕವಾದ ಚೌಕಟ್ಟುಗಳನ್ನು ಮಾಡಿಕೊಂಡು ಚಿತ್ರಿಸಲಾಗಿದೆ. ಒಂದೊಂದು ಪ್ರಮುಖ ಪಟ್ಟಿಕೆಯಲ್ಲಿ ೨೦ ರಿಂದ ೩೬ ರಷ್ಟು ಮಾನವಾಕೃತಿಗಳು ವಿವಿಧ ಭಂಗಿಯಲ್ಲಿ ಸಂಯೋಜಿಸಿದ್ದು ಯಾವ ವ್ಯಕ್ತಿಯನ್ನು ಎಲ್ಲಿ, ಎಷ್ಟು ಜನರಿರಬೇಕೆಂಬ ನಿರ್ಧಾರಕ್ಕೆ ಬರುವ ಜಾಣ್ಮೆ ಮೆಚ್ಚುವಂತಹದ್ದಾಗಿದೆ.

* ಚಪ್ಪಟೆಯ ಬಣ್ಣಗಾರಿಕೆ, ಅರೆದೆರೆದ ಕಣ್ಣುಗಳು, ತುಂಬಿದ ಸ್ಥನಗಳು, ಚಿಕ್ಕದಾದ ಗಲ್ಲ, ಚೂಪಾದ ಮೂಗು, ಬಾಯಿ, ಚಿಕ್ಕದಾದ ತುಟಿ, ಸಣ್ಣದಾದ ನಡು, ನೀಳವಾದ ದೇಹ ಈ ನಿಪ್ಪಾಣಿವಾಡೆ ಭಿತ್ತಿಚಿತ್ರಗಳ ವೈಶಿಷ್ಟ್ಯವಾಗಿದೆ.
* ಸ್ತ್ರೀ ಆಕೃತಿಗಳು ಮರಾಠಾ ಶೈಲಿಯ ಚಿತ್ರಗಳಂತೆ ಸೀರೆಯರು ಕಚ್ಚೆಹಾಕಿ ಕೊಂಡಿದ್ದಾರೆ, ಚುಡಿದಾರ, (ಲಂಗಾ), ರವಿಕೆ, ಕುಪ್ಪಸಗಳನ್ನು ಧರಿಸಿದ್ದು, ಉಡುಗೆಯನ್ನು ಪರಿಶೀಲಿಸುವಾಗ ಮರಾಠಾ ಶೈಲಿ, ದಖ್ಖನ್ ಶೈಲಿ, ರಜಪೂತ್ ಶೈಲಿಗಳಲ್ಲಿಯ ಬಟ್ಟೆಗಳನ್ನು ನಿಪ್ಪಾಣಿ ವಾಡೆ ಭಿತ್ತಿಚಿತ್ರಗಳಲ್ಲಿ ಬಳಸಿಕೊಳ್ಳಲಾಗಿದೆ.
* ಮಹಿಳೆಯರು ಕೇಶಗಳನ್ನು ಹಿಕ್ಕಿಕೊಳ್ಳುವುದು, ಉದ್ದನೆಯ ಜಡೆ ಹಾಕಿದ್ದು, ಬನ್ ಆಕಾರದಲ್ಲಿ ತುರುಬಗಳನ್ನು ಸುತ್ತಿಕೊಳ್ಳುವುದು ಚಿತ್ರಿಸಲಾಗಿದೆ.
* ಪುರುಷರು ಧೋತ್ರಗಳನ್ನು ಉಟ್ಟುಕೊಂಡಿದ್ದು, ಕಚ್ಚೆಯನ್ನು ಹಾಕಿಕೊಂಡಿರುವರು, ಮೇಲುಡುಗೆಯನ್ನು ಕೆಲವು ಕಡೆ ತೊಟ್ಟುಕೊಂಡಿದ್ದು, ಕೃಷ್ಣನನ್ನು ಮೆಲುಡುಗೆ ಇಲ್ಲದೇ ತೋರಿಸಲಾಗಿದೆ. ದುಪ್ಪಟ್ಟಾ ಹಾಕಲಾಗಿದೆ. ಇಲ್ಲಿಯೂ ಕೂಡಾ ವಿವಿಧ ರೀತಿಯಲ್ಲಿ ಅಂದರೆ ದಖ್ಖನ್, ಮರಾಠಾ, ಶೈಲಿಯಲ್ಲಿಯ ಉಡುಗೆಗಳನ್ನು ಬಳಸಿಕೊಳ್ಳಲಾಗಿದೆ.
* ವರ್ಣಗಳನ್ನು ಉಜ್ವಲವಾಗಿ ಬಳಸಿದ್ದು ಬಂಗಾರದ ವರ್ಣ ಹಳದಿ, ಕೆಂಪು, ಕಂದು, ಗೆಂಪು, ಕೇಸರಿ, ಹಸಿರು, ಕಪ್ಪು ವರ್ಣಗಳನ್ನು ಹೆಚ್ಚಾಗಿ ಬಳಸಿದ್ದು ನೀಲಿಬಣ್ಣವನ್ನು ಕೆಲವು ಕಡೆ ಬಳಸಲಾಗಿದೆ.
* ನಿಪ್ಪಾಣಿವಾಡೆ ಭಿತ್ತಿಚಿತ್ರಗಳಲ್ಲಿ ಸಂಯೋಜನೆಯ ಹಿನ್ನೆಲೆಯಲ್ಲಿ ರಾಜಸ್ಥಾನಿ ಅರಮನೆ, ಕಟ್ಟಡಗಳು, ಮಂಟಪಗಳು ಹೀಗೆ ವಾಸ್ತುಗಳನ್ನು ಬಳಸಿಕೊಂಡು ಚಿತ್ರಿಸಲಾಗಿದೆ.
* ಈ ಕಿರುರೂಪ ಚಿತ್ರಗಳಲ್ಲಿ ರೇಖೆಯು ಶಕ್ತಿಯುತವಾಗಿ ಮೂಡಿಬಂದಿದ್ದು, ಉಜ್ವಲ ವರ್ಣಗಳನ್ನು ಬಳಸಿಕೊಂಡಿರುವರು ಇಂತಹ ಕಿರುರೂಪದ ಸೂಕ್ಷ್ಮಪ್ರಮಾಣದ ಚಿತ್ರಗಳು ಭಿತ್ತಿಯ ಮೇಲೆ ಹೇಗೆ ಚಿತ್ರಿಸಿರುವರು ಎಂದು ಆಶ್ಚರ್ಯವಾಗುವಂತಿದೆ.
* ಈ ಕಲಾವಿದರು ಪ್ರಾಣಿ, ಪಕ್ಷಿಗಳನ್ನು ಪ್ರಮಾಣಬದ್ಧವಾಗಿ ಚಿತ್ರಿಸಿರುವರು ಕೆಲವು ಸಂದರ್ಭಗಳಲ್ಲಿ ಛಾಯಾಕರಣದಿಂದಾಗಿ ಪ್ರಾಣಿಗಳಲ್ಲಿ ದುಂಡುತನ ತೋರಿಸಲು ಪ್ರಯತ್ನಿಸಿರುವುದು ಕಂಡುಬರುತ್ತವೆ. ನೈಸರ್ಗಿಕವಾದ ಹೂವು, ಎಲೆ, ಬೆಟ್ಟಗುಡ್ಡಗಳನ್ನು ಸುಂದರವಾಗಿ ಚಿತ್ರಿಸಿರುವರು.

ಒಟ್ಟಿನಲ್ಲಿ ನಿಪ್ಪಾಣಿವಾಡೆ ಭಿತ್ತಿಚಿತ್ರಗಳು ಅತ್ಯಂತ ವೈಭವಯುತ ಶ್ರೀಮಂತ ಮತ್ತು ಕಲಾಕ್ಷೇತ್ರ ಹೊರಗಿನ ಜಗತ್ತಿಗೆ ತಿಳಿಯದೇ ಹೋಗಿರುವುದು ಹಾಗೂ ಅಲ್ಲಿರುವ ಕಲಾಸಂಪತ್ತನ್ನು ಕಾಯುವ ಹೊಣೆ ನಾಡಿನ ಸರಕಾರದ ಹೊಣೆಯಾಗಿದ್ದು, ಖಾಸಗಿ ಒಡೆತನದಲ್ಲಿರುವ ಈ ಕಲಾ ಸಂಪತ್ತನ್ನು ಕಾಲಗತಿಯಿಂದ ಹಾಳಾಗದಂತೆ ರಕ್ಷಿಸಬೇಕಾಗಿದೆ. ಅಲ್ಲಿರುವ ಚಿತ್ರಗಳನ್ನು ಚೊಕ್ಕುಗೊಳಿಸಿ ಅವನ್ನು ಕುರಿತು ಒಂದು ಸುಂದರವಾದ ವಿಡಿಯೋ ಚಿತ್ರಣವನ್ನು ಮಾಡಿ ಜನಗಳ ಮುಂದೆ ಇರಿಸುವುದು ಅವಶ್ಯಕವಾಗಿದೆ.

v v v

## ಅಧ್ಯಾಯ : ಆರು

# ನಿಪ್ಪಾಣಿವಾಡೆ ಭಿತ್ತಿಚಿತ್ರಕಲೆಯ ಆಪತ್ತುಗಳು ಮತ್ತು ಸಂರಕ್ಷಣಾಕ್ರಮಗಳು

ಪ್ರಕೃತಿಯಲ್ಲಿನ ಯಾವ ವಸ್ತುಗಳೂ ಶಾಶ್ವತವಲ್ಲ ಅವು ಒಂದಲ್ಲಾ ಒಂದು ದಿನ ನಾಶಹೊಂದಲೇಬೇಕು ಇದರಿಂದ ಪ್ರಸ್ತುತ ಭಿತ್ತಿಚಿತ್ರಗಳು ಹೊರತಾಗಿಲ್ಲ ಆದರೂ ಸೂಕ್ತ ಕ್ರಮಗಳನ್ನು ಅನುಸರಿಸುವುದರಿಂದ ಆದಷ್ಟು ಹೆಚ್ಚು ದಿನ ಈ ಕಲಾಸಂಪತ್ತನ್ನು ಉಳಿಸಿಕೊಳ್ಳಬಹುದಾಗಿದೆ.

ನಿಪ್ಪಾಣಿವಾಡೆ ಭಿತ್ತಿಚಿತ್ರಗಳು ಸುಮಾರು ೧೮ನೆಯ ಶತಮಾನದಲ್ಲಿ ರಚಿಸಲಾಗಿದ್ದು ಈಗ ಈ ಭಿತ್ತಿಚಿತ್ರಗಳು ಅವನತಿಯತ್ತ ಸಾಗುತ್ತಲಿದ್ದು ಒಂದು ದಿನ ಕಣ್ಮರೆಯಾಗಿ ಬಿಡುವ ಸಾಧ್ಯತೆಯಿದೆ. ಇದನ್ನು ತಪ್ಪಿಸಲು ಆಗದೇ ಇದ್ದರೂ ಕೂಡಾ ನಮ್ಮ ನಾಡಿನ ಸಾಂಸ್ಕೃತಿಕ ಆಸ್ತಿ ಆಗಿರುವ ಇಂತಹ ಚಿತ್ರಗಳನ್ನು ಮುಂದಿನ ಜನಾಂಗಕ್ಕೆ ಉಳಿಸಿಕೊಡುವುದು ಇದಕ್ಕೆ ಸಂಬಂಧಪಟ್ಟವರ ಪ್ರಮುಖ ಕರ್ತವ್ಯವಾಗಿದೆ.

ನಿಪ್ಪಾಣಿವಾಡೆ ಭಿತ್ತಿಚಿತ್ರಗಳಿಗೆ ಒದಗಿರುವ ಆಪತ್ತುಗಳು ಮತ್ತು ಅವುಗಳ ಸಂರಕ್ಷಣೆಯ ಕ್ರಮಗಳನ್ನು ಕುರಿತು ವ್ಯವಸ್ಥಿತವಾಗಿ ವಿಂಗಡಿಸಿ ಹೇಳುವುದು ಅಗತ್ಯವಾಗಿದೆ. ಡಾ.ಯಾದಪ್ಪ ಪರದೇಶಿಯವರು[೧] "ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ" ಮಹಾಪ್ರಬಂಧದಲ್ಲಿ ಭಿತ್ತಿಚಿತ್ರಗಳ ಆಪತ್ತುಗಳು ಮತ್ತು ಸಂರಕ್ಷಣಾ ಕ್ರಮಗಳನ್ನು ಕುರಿತು ವ್ಯವಸ್ಥಿತವಾಗಿ ವಿಂಗಡಿಸಿ ಅಧ್ಯಯನ ಮಾಡಿದ್ದು, ಇಲ್ಲಿರುವ ಕೆಲವೊಂದು ಅಂಶಗಳು ಮುಖ್ಯವಾಗಿದ್ದು, ಪ್ರಸ್ತುತ ಭಿತ್ತಿಚಿತ್ರಗಳಿಗೂ ಸಂಬಂಧಿಸಿವೆ ಇದನ್ನು ಅನುಸರಿಸಿ ಅಧ್ಯಯನ ಮಾಡಲಾಗಿದೆ ಅವು ಈ ಕೆಳಗಿನಂತಿವೆ.

**ಭಿತ್ತಿಚಿತ್ರಗಳಿಗೆ ಒದಗಿರುವ ಆಪತ್ತುಗಳು:**

೧. ಸ್ವಾಭಾವಿಕ ಆಪತ್ತು
೨. ಪ್ರಾಕೃತಿಕ ಆಪತ್ತು
೩. ವ್ಯಕ್ತಿಗತ ಆಪತ್ತು
೪. ಕ್ರಿಮಿಕೀಟಗಳಿಂದಾಗುವ ಆಪತ್ತು

---

೧. ಡಾ.ಯಾದಪ್ಪ ಪರದೇಶಿ: "ಉತ್ತರಕರ್ನಾಟಕದ ಭಿತ್ತಿಚಿತ್ರಕಲೆ", ಪು.೫೦೩.

**ಸ್ವಾಭಾವಿಕ ಆಪತ್ತು:**

ಕಾಲಕಳೆದಂತೆ ಭಿತ್ತಿಚಿತ್ರಗಳಿಗೆ ಉಪಯೋಗಿಸಲಾದ ವಸ್ತುಗಳ ಸತ್ವ ಕಡಿಮೆಯಾಗಿ ಭಿತ್ತಿಚಿತ್ರಗಳು ಹಾಳಾಗುವುದನ್ನು ಇಲ್ಲಿ ಸ್ವಾಭಾವಿಕ ಆಪತ್ತು ಎಂದು ಪರಿಗಣಿಸಲಾಗಿದೆ. ಭಿತ್ತಿಚಿತ್ರಗಳಿಗೆ ಉಪಯೋಗಿಸಿದ ಬಣ್ಣಗಳು ಕಾಲಾಂತರದಲ್ಲಿ ಮುಸುಕಾಗುವುದು, ಉದುರಿಹೋಗುವುದು ಸಹಜಕ್ರಿಯೆ ಹೀಗೆ ಬಣ್ಣ ಮಸುಕಾಗಿರುವುದು ಉದುರಿಹೋಗುವುದು ಹೆಚ್ಚಿನ ಎಲ್ಲಾ ಪ್ರಾಚೀನ ಭಿತ್ತಿಚಿತ್ರಗಳಲ್ಲಿಯೂ ಕಾಣಬಹುದು. ನಿಪ್ಪಾಣಿವಾಡೆ ಭಿತ್ತಿಚಿತ್ರಗಳು ದರ್ಭಾರ್ ಹಾಲ್‌ದಲ್ಲಿಯ ಭಿತ್ತಿಚಿತ್ರಗಳಿಗಿಂತ ಪಹಾರ್‌ಹಾಲ್‌ದಲ್ಲಿಯ ಭಿತ್ತಿಚಿತ್ರಗಳು ಸರಿಯಾಗಿ ಬೆಳಕು ಗಾಳಿಗಳಿಲ್ಲದೆ ಇದ್ದರೂ ಭಿತ್ತಿಯಲ್ಲಿಯ ಸತ್ವ ಕಡಿಮೆ ಆದಂತೆ ಕಂಡುಬರುತ್ತಿದ್ದು, ವರ್ಣಗಳು ಉದುರುತ್ತ ಸಾಗಿವೆ. ಇದು ಸ್ವಾಭಾವಿಕವಾದ ಆಪತ್ತುಗಳು ಎನ್ನಬಹುದು.

**ಪ್ರಾಕೃತಿಕ ಆಪತ್ತು:**

ಪ್ರಕೃತಿಯಲ್ಲಿನ ನೀರು, ಬೆಂಕಿ, ಗಾಳಿಗಳಿಂದ ಭಿತ್ತಿಚಿತ್ರಗಳಿಗಾಗುವ ಹಾನಿಗಳನ್ನು ಪ್ರಾಕೃತಿಕ ಆಪತ್ತುಗಳೆಂದು ಪರಿಗಣಿಸಲಾಗಿದೆ.

**ನೀರು:**

ಭಿತ್ತಿಚಿತ್ರಗಳಿಗೊದಗುವ ಹಲವಾರು ಆಪತ್ತುಗಳಲ್ಲಿ ನೀರಿನಿಂದಲೇ ಅತ್ಯಂತ ಹೆಚ್ಚಿನ ಹಾನಿ ಸಂಭವಿಸುತ್ತಲಿದೆ. ಮೇಲ್ಛಾವಣಿಯಿಂದ ನೀರು ಸೋರುವಿಕೆ ಗೋಡೆಯಲ್ಲಿನ ಬಿರುಕುಗಳಿಂದ ನೀರು ಜಿನುಗುವುದು ತಂಪು ಹಿಡಿಯುವುದು ಹೀಗೆ ಯಾವುದೇ ರೀತಿಯಿಂದ ನೀರಿನ ಸಂಪರ್ಕ ಭಿತ್ತಿಚಿತ್ರಗಳಿಗೆ ಹಾನಿಯಾಗುವುದು ತಪ್ಪಿದ್ದಲ್ಲ.

**ಬೆಂಕಿ:**

ಆಕಸ್ಮಿಕವಾಗಿಯೇ ಆಗಲಿ ಉದ್ದೇಶಪೂರ್ವಕವಾಗಿಯೇ ಆಗಲಿ ಭಿತ್ತಿಚಿತ್ರಗಳಿರುವ ಕಟ್ಟಡಗಳು ಬೆಂಕಿಗೆ ಒಳಗಾದಾಗ ಭಿತ್ತಿಯಲ್ಲಿಯ ಚಿತ್ರಗಳು ಸುಟ್ಟು ವರ್ಣಗಳು ಉದುರಿ ಅಥವಾ ಕಪ್ಪಾಗಿ ಕಲೆ ಮೂಡಿ ಕಾಣದಂತಾಗುವುದರಿಂದಲೂ ಭಿತ್ತಿ ಚಿತ್ರಗಳು ಹಾಳಾಗುತ್ತವೆ.

**ಗಾಳಿ:**

ಗಾಳಿಬೀಸಿದಾಗ ಗಾಳಿಯೊಂದಿಗೆ ಬರುವ ಧೂಳಿನ ಕಣದಿಂದಲೂ ಭಿತ್ತಿಚಿತ್ರಗಳು ಹಾಳಾಗುತ್ತವೆ. ವಾತಾವರಣ ಕಲುಷಿತವಾದಾಗಲೂ ಈ ಭಿತ್ತಿಚಿತ್ರಗಳು ಹಾಳಾಗುತ್ತವೆ. ಧೂಳಿನಲ್ಲಿ ಕ್ರಿಮಿಗಳು ಬಂದು ಭಿತ್ತಿಯನ್ನು ತಿಂದು ಹಾಳುಗೆಡಿಸಲೂಬಹುದು ಗಾಳಿಯಿಂದಾಗಿ ಧೂಳು ಭಿತ್ತಿಯನ್ನು ಆವರಿಸುತ್ತವೆ ಇದರಿಂದಾಗಿ ಭಿತ್ತಿಚಿತ್ರಗಳು ಹಾಳಾಗಬಹುದು.

**ವ್ಯಕ್ತಿಗತ ಆಪತ್ತು:**

ವ್ಯಕ್ತಿಗತ ಆಪತ್ತುಗಳು ಎಂದರೆ ವ್ಯಕ್ತಿಯಿಂದ ಆಗುವ ಯಾವುದೇ ಚಟುವಟಿಕೆಗಳಿಂದ ಭಿತ್ತಿಚಿತ್ರಗಳಿಗೆ ಹಾನಿ ಸಂಭವಿಸಿದಾಗ ಅದು ವ್ಯಕ್ತಿಗತ ಆಪತ್ತುಗಳೆಂದು ಪರಿಗಣಿಸಬೇಕಾಗುತ್ತದೆ. ನಿಪ್ಪಾಣಿವಾಡೆ ಭಿತ್ತಿಚಿತ್ರಗಳನ್ನು ಗಮನಿಸಿದಾಗ ಈ ಭಿತ್ತಿಗಳ ಬಗ್ಗೆ ಸರಿಯಾಗಿ ತಿಳಿದುಕೊಳ್ಳದೆ ಇರುವುದು ಪ್ರಮುಖ ಕಾರಣವಾಗಿದೆ. ಈ ಅರಮನೆಯನ್ನು ನೋಡಲು ಬರುವ ವಿದ್ಯಾರ್ಥಿಗಳು, ಪ್ರವಾಸಿಗರು ಅರಮನೆಯ ವಾಸ್ತುವನ್ನು ನೋಡುವುದರೊಂದಿಗೆ, ಈ ಭಿತ್ತಿಚಿತ್ರಗಳನ್ನು ವೀಕ್ಷಿಸುತ್ತ ಬಂಗಾರದ ವರ್ಣವನ್ನು ಕೆದರಿಕೊಂಡು ಹೋಗುವ ಜನ ಕೆಲವರಾದರೆ, ಈ ಭಿತ್ತಿಚಿತ್ರಗಳ ಮೇಲೆ ತಮ್ಮ ಕೈಯ್ಯನು ಆಡಿಸುವುದು, ಮುಟ್ಟಿ ನೋಡುವುದು, ಕಡ್ಡಿಯಿಂದ ಕೆದರುವುದು, ಗೀಚುವುದು ಹೀಗೆ ಮಾಡಿ ಸಾರ್ವಜನಿಕರು ಪ್ರವಾಸಿಗರು ಹಾಳುಕೆಡವಿದರೆ ಇನ್ನೊಂದುಕಡೆ ಬುದ್ಧಿವಂತರೆನ್ನುವ ಕೆಲವು ಜನ (ನಿಪ್ಪಾಣಿಯ ವಾಡೆ) ದರ್ಭಾರ್‌ಹಾಲ್‌ದಲ್ಲಿ ಹಿಂದಿ ಚಿತ್ರವೊಂದನ್ನು ಚಿತ್ರೀಕರಿಸಿದ್ದು, ದರ್ಭಾರ್ ಹಾಲ್ ಚೆನ್ನಾಗಿ ಕಾಣಬೇಕೆಂದು ಡಿಸ್ಟಂಪರ್ ಹಚ್ಚಿರುವರು ಅದಕ್ಕೆ ಅರಮನೆಯವರು ಒಪ್ಪಿಗೆ ಕೊಟ್ಟಿರುವರು ಇದರಿಂದಾಗಿ ಭಿತ್ತಿಚಿತ್ರಗಳ ಮೇಲೆ ಹಚ್ಚಿರುವ ಡಿಸ್ಟಂಪರ್ ಈಗ ಮತ್ತೆ ಅದನ್ನು ತೊಳೆದು ಭಿತ್ತಿಚಿತ್ರಗಳನ್ನು ಉಳಿಸಿಕೊಳ್ಳಲು ಮಾಡಿದ ಪ್ರಯತ್ನಗಳೂ ಕೆಲವೊಂದು ಕಡೆ ವಿಫಲವಾಗಿವೆ. ಈ ಭಿತ್ತಿಚಿತ್ರಗಳ ಮಹತ್ವವನ್ನು ಅರಿಯದೇ ಹೋದದ್ದು ನಾಡಿನ ಅಪೂರ್ವವಾದ ಭಿತ್ತಿಚಿತ್ರ ಕಲಾಸಂಪತ್ತನ್ನು ಅರಿತೋ ಅರಿಯದೆಯೋ ಆಗುತ್ತಿರುವ ಅನಾಹುತಗಳನ್ನು "ವ್ಯಕ್ತಿಗತ ಆಪತ್ತುಗಳು" ಎಂದು ಪರಿಗಣಿಸಲಾಗಿದೆ.

**ಕ್ರಿಮಿಕೀಟಗಳಿಂದಾಗುವ ಆಪತ್ತು:**

ಕೀಟಗಳು ಬಿಡುಗಡೆಗೊಳಿಸುವ ಗಂಧಕಾಮ್ಲದಿಂದ ಶಿಲ್ಪಗಳನ್ನು ಪದರ ಪದರವಾಗಿ ನಾಶಗೊಳಿಸುತ್ತವೆ ಎನ್ನಲಾಗಿದ್ದು, ಅದೇ ಪ್ರಕಾರ ಭಿತ್ತಿಚಿತ್ರಗಳ ಮೇಲೆ ಸೂಕ್ಷ್ಮಾಣುಜೀವಿಗಳು ವಾಸಮಾಡಿ ಚಿತ್ರಗಳಿಗೆ ಹಾನಿ ಉಂಟುಮಾಡುತ್ತವೆ. ಭಿತ್ತಿಚಿತ್ರಗಳ ಭಿತ್ತಿಯು ಪುಡಿಪುಡಿಯಾಗಿ ಉದುರುತ್ತದೆ. ನಿಪ್ಪಾಣಿ ಭಿತ್ತಿಯು ಪಹಾರಾಹಾಲ್‌ದಲ್ಲಿರುವ ಭಿತ್ತಿಯು ಪುಡಿಪುಡಿಯಾಗಿ ಕೆಳಗುದುರುತ್ತಿದ್ದು ಹಿನ್ನೆಲೆಯ ಗಾರೆ ಕಾಣಿಸುತ್ತದೆ. ಇದು ಬಹುಶಃ ಸೂಕ್ಷ್ಮಾಣುಜೀವಿಗಳ ದಾಳಿಯಿಂದಲೇ ಆಗಿರಬಹುದು ಎನಿಸುತ್ತದೆ.[೨]

ಪ್ರಾಚೀನ ಕಲಾಕೃತಿಗಳು ಹೆಚ್ಚುದಿನ ಬಾಳಿಕೆ ಬರುವಂತಾಗಲು ಅವುಗಳ ಸಂರಕ್ಷಣೆಯ ವಿಧಾನಗಳಲ್ಲಿ ಇನ್ನೂ ಹೊಸ ಹೊಸ ಸಂಶೋಧನೆಗಳಾಗಬೇಕಾಗಿದೆ. ಕೆಂಪು, ಬಿಳುಪು, ಕಪ್ಪು ಬಣ್ಣಗಳ ಲೇಪನಗಳು ಇಂದಿಗೂ ಪ್ರಖರವಾಗಿ ಉಳಿದಿರುವುದಕ್ಕೆ ಅವುಗಳಲ್ಲಿಯ ಪ್ರಕೃತಿ ಸಹಜ ಕ್ರಿಮಿನಾಶಕ ಗುಣಗಳಿಂದ ಎನ್ನಲಾಗುತ್ತದೆ.

---

೨. ಡಾ.ಯಾದಪ್ಪ ಪರದೇಶಿ: "ಉತ್ತರಕರ್ನಾಟಕದ ಭಿತ್ತಿಚಿತ್ರಕಲೆ", ಪು.೫೧೧.

**ಭಿತ್ತಿಚಿತ್ರಕಲೆಯ ಸಂರಕ್ಷಣೆಯ ಕ್ರಮಗಳು:**

**ನೇರ ಕ್ರಮಗಳು:**

ಭಿತ್ತಿಚಿತ್ರಗಳು ಹಾಳಾದಾಗ ಪುನಃ ಜೀರ್ಣೋದ್ಧಾರ ಮಾಡುವುದು ರಕ್ಷಣೆಯ ಒಂದು ಕ್ರಮವಾಗಿದೆ. ಭಿತ್ತಿಚಿತ್ರಗಳನ್ನು ಪುನಃ ರೂಪಿಸುವುದರ ಮೂಲಕ ಸಂರಕ್ಷಿಸಬಹುದು ಪುನಃ ರೂಪಿಸುವ ಮೊದಲು ನವಿರಾದ ಕುಂಚದಿಂದ ತೆಗೆದು ಸ್ವಚ್ಚಗೊಳಿಸಬೇಕು. ಹೀಗೆ ಸ್ವಚ್ಛಗೊಳಿಸಿದ ನಂತರ ಭಿತ್ತಿಚಿತ್ರಕಲೆಯ ಬಗ್ಗೆ ಪೂರ್ಣಮಾಹಿತಿ ಇರುವ ನುರಿತ ಕಲಾವಿದರಿಂದ ಆಧುನಿಕ ಭಿತ್ತಿಯನ್ನು ಸಿದ್ಧಗೊಳಿಸಿ ಮೂಲಚಿತ್ರದ ಮಾದರಿಯಲ್ಲಿ ಮತ್ತು ಚಿತ್ರದ ವರ್ಣಗಳಿಗೆ ಸರಿಹೊಂದುವ ವರ್ಣವನ್ನು ಬೆರೆಸಿ ಬಣ್ಣವನ್ನು ತುಂಬಿ ಹಿನ್ನೆಲೆ ವರ್ಣಲೇಪನಕ್ಕೆ ಸಿಂಥೆಟಿಕ್ ಅಕ್ರ್ಯಾಲಿಕ್‌ನಂತಹ ವರ್ಣಗಳನ್ನು ಬಳಸಿಕೊಂಡು ರಚಿಸಿದ ಚಿತ್ರವುಪೂರ್ತಿಯಾಗಿ ಒಣಗಿದ ನಂತರ ಗುಣಾತ್ಮಕವಾರ್ನೀರ್ಷ್‌ನ ತೆಳುವಾದ ಲೇಪನ ಮಾಡಲಾಗುವುದು ಆದರೂ ಕೂಡ ಮೂಲಭಿತ್ತಿಚಿತ್ರಗಳು ಕೊಡುವ ಅನುಭವವೇ ಬೇರೆ ಈ ಚಿತ್ರಗಳನ್ನು ಹೆಚ್ಚುದಿನ ಸಂರಕ್ಷಿಸುವ ಅಗತ್ಯತೆ ಇದೆ.

**ಪ್ರತಿ ಮಾಡುವುದು:**

ಮೂಲಕಲಾಕೃತಿಯನ್ನು ನಕಲು ಮಾಡುವುದು ಈ ಕೃತಿಯ ಮೇಲೆ ಟ್ರೆಸಿಂಗ್ ಪೇಪರ ಸಹಾಯದಿಂದ ಟ್ರೇಸ್ ಮಾಡಿ ಯಥಾವತ್ತಾದ ಚಿತ್ರ ಬಿಡಿಸುವುದು. ಇಲ್ಲವೇ ಮೂಲಚಿತ್ರದ ಮುಂದೆ ಕುಳಿತು ಯಥಾವತ್ತಾಗಿ ಚಿತ್ರಿಸಿಕೊಳ್ಳುವುದು ಇದರಿಂದ ಮೂಲಚಿತ್ರಕ್ಕಿಂತ ಅಲ್ಪಸ್ವಲ್ಪ ಬದಲಾವಣೆಗಳು ಆಗಿರುತ್ತವೆ. ಪುರಾತನರು ಬಳಸಿದ ಬಣ್ಣಗಳು ನೈಸರ್ಗಿಕವಾಗಿದ್ದು, ಈಗಿನವರು ಬಳಸುವ ಬಣ್ಣಗಳು ರಾಸಾಯನಿಕವಾಗಿದ್ದು, ಮೂಲಚಿತ್ರಗಳ ವರ್ಣವೈವಿಧ್ಯತೆಗಿಂತ ಬೇರೆಯದೇ ಆದ ಹೊಳಪು ಬರುವ ಸಂಭವವಿರುತ್ತದೆ.[೩]

**ಛಾಯಾ ಚಿತ್ರಣ:**

ಹಾಳಾಗುತ್ತಿರುವ ಭಿತ್ತಿಚಿತ್ರಗಳನ್ನು ಛಾಯಾಚಿತ್ರಣ ಮಾಡಿಸಿ ದಾಖಲಿಸಿಕೊಳ್ಳುವುದು.

**ಸ್ಲೈಡ್ಸ್ ಮಾಡಿಸುವುದು:**

ಛಾಯಾಚಿತ್ರಣ ಮಾಡಿದ ಸ್ಕ್ರೀನ್‌ನ ಮೇಲೆ ಮೂಡಿಸಿ ಚಿತ್ರಗಳನ್ನು ಸ್ಪಷ್ಟವಾಗಿ ತಿಳಿಯಲು ಉತ್ತಮ ಸಾಧನವಾಗಿದೆ.

**ವಿಡಿಯೋ ಚಿತ್ರೀಕರಣ ಮಾಡುವುದು:**

ವಿಡಿಯೋ ಚಿತ್ರೀಕರಣ ಮಾಡಿದ ದೃಶ್ಯಗಳನ್ನು ನೋಡಿದಾಗ ನೇರವಾಗಿ ಚಿತ್ರಗಳ ನೆಲೆಯಲ್ಲಿ ನಿಂತು ನೋಡಿದಂತ ಅನುಭವವಾಗುತ್ತದೆ. ಹೀಗೆ ದಾಖಲೆಗೊಳಿಸುವುದರಿಂದ ಜನಸಾಮಾನ್ಯರಿಗೆ, ಕಲಾಭಿಮಾನಿಗಳಿಗೆ, ಅಧ್ಯಯನಕಾರರಿಗೆ ಚರಿತ್ರೆಯ ಮೂಲಸ್ವರೂಪವನ್ನು ದೊರಕಿಸುವಲ್ಲಿ ಸಹಾಯಕವಾಗುತ್ತದೆ. ಹಾಗೂ ಪ್ರಾಚೀನ ಚಿತ್ರಗಳ ಮಹತ್ವವನ್ನು ಸಾರಬಹುದಾಗಿದೆ.[೪]

---

೩. ಡಾ.ಅ.ಲ.ನರಸಿಂಹನ್: "ಕರ್ನಾಟಕದ ಭಿತ್ತಿಚಿತ್ರ ಪರಂಪರೆ", ಪು.೧೫೫.

೪. ಶ್ರೀಮತಿ ಸುಚಿತ್ರಾ ಲಿಂಗದಳ್ಳಿ: "ವಿಜಯನಗರ ಭಿತ್ತಿಚಿತ್ರಕಲೆ", ಪು.೮೬.

**ಪೂರಕ ಕ್ರಮಗಳು:**

ಪ್ರಾಚೀನ ಭಿತ್ತಿಚಿತ್ರಗಳ ಛಾಯಾಚಿತ್ರಗಳ್ನನು ಪುಸ್ತಕಗಳಲ್ಲಿ ಮುದ್ರಿಸುವುದು ರಕ್ಷಣೆಯ ಒಂದು ವಿಧಾನವಾಗಿದೆ. ಇತಿಹಾಸ, ಪಠ್ಯಕ್ರಮಗಳಲ್ಲಿ ಈ ಭಿತ್ತಿಚಿತ್ರಗಳ ಛಾಯಾಚಿತ್ರಗಳನ್ನು ಮುದ್ರಿಸುವುದರಿಂದ ವಿದ್ಯಾರ್ಥಿಗಳಿಗೆ, ಜನಸಾಮಾನ್ಯರಿಗೆ ಪ್ರಾಚೀನ ಭಿತ್ತಿಚಿತ್ರಕಲೆಯ ಕುರಿತು ಮಾಹಿತಿಯನ್ನು ಒದಗಿಸಿದಂತಾಗುತ್ತದೆ. ಆಗ ಈ ಭಿತ್ತಿಚಿತ್ರಗಳ ಬಗ್ಗೆ ಆಸಕ್ತಿ ಇರುವವರು ಸಮಗ್ರ ಅಧ್ಯಯನ ಮಾಡುವ, ಸಂಶೋಧನೆ ಮಾಡುವ ಅವಶ್ಯಕತೆ ಹೆಚ್ಚುತ್ತದೆ ಹಾಗೆಯೇ ಈ ಭಿತ್ತಿಚಿತ್ರಗಳನ್ನು ವಾಣಿಜ್ಯ ವಸ್ತುಗಳಲ್ಲಿಯೂ ಬಳಸಿಕೊಳ್ಳಬಹುದಾಗಿದೆ.

v v v

ಅಧ್ಯಾಯ : ಏಳು

# ಸಮಾರೋಪ

ಕಲೆ ಸುಸಂಸ್ಕೃತ ಜೀವನದ ಪ್ರತಿಬಿಂಬ ನಾಗರಿಕ ಜೀವನದ ಪ್ರತಿನಿಧಿ. ಒಂದು ದೇಶದ ಕಲೆಯು ಆ ದೇಶದ ಸಂಸ್ಕೃತಿಯ ಪಡಿನೆರಳಾಗಿರುತ್ತದೆ. ಹೀಗೆ ಒಂದು ದೇಶದ ಒಂದು ನಾಡಿನ ಸಾಂಸ್ಕೃತಿಕ ಇತಿಹಾಸ ರಚಿಸುವಲ್ಲಿ ನಿಪ್ಪಾಣಿವಾಡೆ ಭಿತ್ತಿಚಿತ್ರಗಳು ಮಹತ್ವವಾಗುತ್ತವೆ. ಅವು ನಾಡಿನ ಸಾಂಸ್ಕೃತಿಕ ಶ್ರೀಮಂತಿಕೆಯನ್ನು ಹೆಚ್ಚಿಸುವಲ್ಲಿ ಪ್ರಮುಖ ಪಾತ್ರವಹಿಸಿದ್ದು ತಿಳಿದುಬರುತ್ತದೆ. ಕರ್ನಾಟಕದ ಇತಿಹಾಸದಲ್ಲಿ ದೀರ್ಘಕಾಲದ ನಂತರದಲ್ಲಿ ಹೊಸ ಪರಂಪರೆಯೊಂದಿಗೆ ನಿಪ್ಪಾಣಿವಾಡೆ ಭಿತ್ತಿಚಿತ್ರಗಳು ನಾಡಿನ ಕಲಾಸಂಪತ್ತಿಗೆ ತನ್ನದೇ ಆದ ವಿಶಿಷ್ಠ ಲಕ್ಷಣಗಳೊಂದಿಗೆ ಚಿತ್ರಕಲೆಯ ಪುನರಾರಂಭಕ್ಕೆ ನಾಂದಿಯನ್ನು ಹಾಡಿದೆ.

ಯಾವುದೇ ಒಂದು ಅಧ್ಯಯನಕ್ಕೆ ಅಧ್ಯಯನ ಕ್ರಮ ಮುಖ್ಯವಾಗಿದ್ದು, ಅಧ್ಯಯನವೊಂದಕ್ಕೆ ಸೀಮಿತವಾದ ವಿಷಯವು ಅಗತ್ಯವಾಗಿರುತ್ತದೆ. ಹೀಗಾಗಿ ಆರು ಅಧ್ಯಾಯಗಳನ್ನು ಒಳಗೊಂಡಿರುವ ಈ ಪ್ರಬಂಧವು ಒಂದೊಂದು ಅಧ್ಯಾಯದಲ್ಲಿ ಅದರ ವ್ಯಾಪ್ತಿಗೆ ಸಂಬಂಧಿಸಿದ ವಿಷಯದ ಪದರುಗಳನ್ನು ಬಿಚ್ಚಿಕೊಳ್ಳುತ್ತಾ ಹೋಗುತ್ತದೆ.

**ಮೊದಲನೆಯ ಅಧ್ಯಾಯ:**

ಅಧ್ಯಯನದ ಉದ್ದೇಶ, ಸ್ವರೂಪ, ವ್ಯಾಪ್ತಿ ಅಧ್ಯಯನಕ್ಕೆ ಬಳಸಿದ ವಿಧಿ ವಿಧಾನಗಳನ್ನು ಈ ಅಧ್ಯಾಯ ಹೊಂದಿದೆ.

**ಎರಡನೆಯ ಅಧ್ಯಾಯ:**

ನಿಪ್ಪಾಣಿ ಸಂಸ್ಥಾನ ಮತ್ತು ಸಾಂಸ್ಕೃತಿಕ ಪರಿಸರ ಕುರಿತು ಹೇಳಲಾಗಿದ್ದು, ಪ್ರಮುಖ ಸರ್ಧಾರ್‌ರು ಸಾಂಸ್ಕೃತಿಕ ಕ್ಷೇತ್ರಕ್ಕೆ ಕೊಟ್ಟಂತಹ ಕೊಡುಗೆಗಳನ್ನು ಸ್ಥೂಲವಾಗಿ ಹೇಳಿ ಅಲ್ಲಿನ ಸಾಂಸ್ಕೃತಿಕ ಪರಿಸರ ಚಿತ್ರಕಲೆಗೆ ಪೂರಕವಾದ ವಾತಾವರಣ ನಿರ್ಮಾಣ ಮಾಡಿತ್ತು ಎಂಬುದನ್ನು ಕಂಡುಕೊಳ್ಳಲಾಗಿದೆ.

**ಮೂರನೆಯ ಅಧ್ಯಾಯ:**

ಭಿತ್ತಿಚಿತ್ರಗಳ ಸಿದ್ಧತೆ ಮತ್ತು ರಚನಾ ವಿಧಾನಗಳ ಕುರಿತು ಚರ್ಚಿಸಲಾಗಿದೆ. ಪ್ರಸ್ತುತ ಚಿತ್ರಗಳು ಮಣ್ಣಿನ ಗಾರೆಗೋಡೆಯ ಮೇಲೆ ರಚಿಸಲಾಗಿದ್ದು, ಭಿತ್ತಿಯನ್ನು ಸಿದ್ಧಗೊಳಿಸುವ ಕ್ರಮ ನಂತರ ಚಿತ್ರರಚಿಸುವ ವಿಧಾನ, ಚಿತ್ರಪರಿಕರಗಳನ್ನು ಭಿತ್ತಿಚಿತ್ರಗಳಿರುವ ಕಾಲಮಾನದಲ್ಲಿ ರಚಿತಗೊಂಡ ಪ್ರಾಚೀನಗ್ರಂಥಗಳಲ್ಲಿರುವ ಭಿತ್ತಿಚಿತ್ರ ರಚನಾ ವಿಧಿ-ವಿಧಾನ ಕುರಿತು, ಹೋಲಿಕೆಗಳನ್ನು ಚರ್ಚೆ ವಿವೇಚಿಸಲಾಗಿದ್ದು, ಅಲ್ಲದೆ ಪ್ರಾಚೀನ ಗ್ರಂಥಗಳಲ್ಲಿನ ಉಲ್ಲೇಖಗಳನ್ನು ಅನುಸರಿಸಿ ಭಿತ್ತಿಚಿತ್ರಗಳನ್ನು ರಚಿಸಿರುವ ವಿಧಿವಿಧಾನಗಳನ್ನು ಇಲ್ಲಿ ಚರ್ಚಿಸಲಾಗಿದೆ.

**ನಾಲ್ಕನೆಯ ಅಧ್ಯಾಯದಲ್ಲಿ:**

ಈ ಅಧ್ಯಾಯವು ಭಿತ್ತಿಚಿತ್ರಗಳ ವಸ್ತು ವಿಷಯ ಕುರಿತದ್ದಾಗಿದೆ. ಇದರಲ್ಲಿ ಚಿತ್ರಗಳ ಶೈಲಿ, ತಂತ್ರ, ಪ್ರಭಾವವನ್ನು ವಿಶಿಷ್ಟವಾಗಿದ್ದು, ಪ್ರಮುಖವಾಗಿ ಪರಿಗಣಿಸಲಾಗಿದೆ. ಚಿತ್ರಗಳ ಕ್ರಮಬದ್ಧವಾದ ವಿಶ್ಲೇಷಣೆ ದೃಷ್ಟಿಯಿಂದ ವಿಷಯ ವಸ್ತುಗಳನ್ನು ವಿಷಯಾನುಸಾರ ದರ್ಭಾರ್ ಹಾಲ್ ಮತ್ತು ಪಹಾರಾಹಾಲ್‌ದಲ್ಲಿಯ ಚಿತ್ರಗಳೆಂದು ವಿಂಗಡಿಸಿಕೊಂಡು ಅಧ್ಯಯನ ಮಾಡಲಾಗಿದೆ. ಇಲ್ಲಿ ಕಲಾವಿದನ ಜಾಣ್ಮೆ ಕೌಶಲ್ಯತೆಯನ್ನು ಸೃಜನಾತ್ಮಕತೆಯ ಹಿನ್ನೆಲೆಯಲ್ಲಿ ಗುರುತಿಸಲಾಗಿದೆ ಮತ್ತು ರಚಿಸಿದ ವಿಭಿನ್ನ ಕಲಾಕೃತಿಗಳಲ್ಲಿನ ಕಲಾತ್ಮಕ ಅಂಶಗಳನ್ನು ವಿಶೇಷವಾಗಿ ವಿವೇಚಿಸಲಾಗಿದೆ.

**ಐದನೆಯ ಅಧ್ಯಾಯ:**

ಭಿತ್ತಿಚಿತ್ರಗಳ ವಿಶಿಷ್ಟ ಶೈಲಿ, ವಿಷಯ ಸಂವಹನಗೊಳ್ಳಲು ಕಲಾವಿದ ಬಳಸಿರುವ ತಂತ್ರ ಇತರ ಚಿತ್ರಗಳಿಂದ ಪರೋಕ್ಷ ಪ್ರಭಾವ ಮತ್ತು ಚಿತ್ರಗಳಲ್ಲಿರುವ ಶಿಷ್ಟಪದ ಮತ್ತು ಜಾನಪದ ಅಂಶಗಳನ್ನು ಕಲಾವಿದನ ಸೃಜನಾತ್ಮಕತೆಯ ಹಿನ್ನೆಲೆಯಲ್ಲಿ ಗುರುತಿಸುವ ಕಾರ್ಯವನ್ನು ಮಾಡಲಾಗಿದೆ.

**ಆರನೆಯ ಅಧ್ಯಾಯ:**

ಈ ಭಿತ್ತಿಚಿತ್ರಕಲಾ ಸಂಪತ್ತಿಗೆ ಒದಗಿರುವ ಆಪತ್ತುಗಳು ಮತ್ತು ಇಂದಿನ ಸ್ಥಿತಿಗತಿ ಅವುಗಳ ಸಂರಕ್ಷಣೆಯ ವಿಧಾನಗಳಲ್ಲಿ ಭಿತ್ತಿಚಿತ್ರಗಳ ಮಹತ್ವದ ಹಿನ್ನೆಲೆಯಲ್ಲಿ ಆಧುನಿಕ ಕ್ರಮಗಳನ್ನು ಹೇಳಲಾಗಿದೆ. ಈ ವಿಧಾನಗಳು ಕಲಾ ಸಂಪತ್ತನ್ನು ಉಳಿಸುವಲ್ಲಿ ಮಹತ್ವದ್ದಾಗಿ ಕಂಡುಬರುತ್ತದೆ.

**ಅಧ್ಯಯನದ ಫಲಿತಗಳು :**

೧. ಈ ಭಿತ್ತಿಚಿತ್ರಗಳು ಹಲವು ವೈಶಿಷ್ಟ್ಯಗಳಿಂದ ಕೂಡಿದ್ದು ನಾಡಿನ ಕಲಾ ಇತಿಹಾಸದಲ್ಲಿ ತನ್ನದೇ ಆದ ಒಂದು ಪ್ರತ್ಯೇಕ ಛಾಪನ್ನು ಮೂಡಿಸಿದ್ದುದು ಕಂಡು ಬರುತ್ತದೆ.

೨. ಅಳಿದು ಹೋದ ಸಂಪ್ರದಾಯವನ್ನು ಉಳಿಸುವ ಮತ್ತು ಬೆಳೆಸುವ ಉದ್ದೇಶದಿಂದ ಇಂದಿನವರಿಗೆ ಹಿಂದಿನವರ ಪರಿಚಯವಾಗುವಲ್ಲಿ ಈ ಭಿತ್ತಿಚಿತ್ರಗಳು ಒಂದು ಪ್ರಮುಖವಾದ ದೃಶ್ಯಮಾದ್ಯಮವಾಗಿದೆ.

೩. ಇಲ್ಲಿಯ ಚಿತ್ರಗಳಲ್ಲಿ ಆಕಾರಗಳು ಚಪ್ಪಟೆಯಾಗಿದ್ದು ದುಂಡುತನದ ಪ್ರಯತ್ನ ತೆಳ್ಳನೆ ದೇಹ ಕೈ-ಹಸ್ತ, ಮುಖ, ಎದೆ, ಸ್ಥನ, ಬೆರಳುಗಳಲ್ಲಿರುವ ಲಾಲಿತ್ಯ, ಮುಖದಲ್ಲಿ ಭಾವನೆ ಅರೆದೆರೆದ ಕಣ್ಣುಗಳು ಅಜಂತಾ ಭಿತ್ತಿ ಚಿತ್ರಗಳ ಮತ್ತು ರಜಪೂತ ಕಿರುರೂಪ ಚಿತ್ರಗಳನ್ನು ಪರಿಚಯಿಸುತ್ತವೆ. ಇದು ನಿಪ್ಪಾಣಿ ಭಿತ್ತಿ ಚಿತ್ರಗಳ ವೈಶಿಷ್ಟ್ಯವಾಗಿದೆ.

೪. ಇಲ್ಲಿಯ ಚಿತ್ರಗಳು ಶಿಷ್ಟಪದ ಚಿತ್ರಗಳೇ ಆಗಿದ್ದು ಜನಪದಿಯ ಅಂಶಗಳನ್ನು ಬಳಸಿಕೊಂಡು ಸ್ಥಳೀಯ ಪ್ರಭಾವಗಳು ಮತ್ತು ಭಾವನೆಗಳನ್ನು ಹೊರಹೊಮ್ಮಿಸುವ ಚಿತ್ರಗಳಾಗಿವೆ.

೫. ದರ್ಭಾರ್ ಹಾಲ್‌ದಲ್ಲಿಯ ಭಿತ್ತಿಚಿತ್ರಗಳನ್ನು ದೊಡ್ಡಮಾಡುಗಳು, ಚಿಕ್ಕಮಾಡುಗಳು, ಉದ್ದವಾದ ಮಾಡುಗಳು, ಅಡ್ಡದಾದ ಮಾಡುಗಳು, ತ್ರಿಕೋನಾಕಾರದ ಮಾಡುಗಳು ಹೀಗೆ ವಿವಿಧ ಆಕಾರದ ಮಾಡುಗಳಲ್ಲಿ ಹಾಗೂ ಮಧ್ಯದ ಸಮತಟ್ಟಾದ ಗೋಡೆಯ ಮೇಲೆ ಚಿತ್ರಗಳನ್ನು ಬರೆಯಲಾಗಿದೆ.

೬. ಪಹಾರಾ ಹಾಲ್‌ದಲ್ಲಿಯ ಭಿತ್ತಿ ಚಿತ್ರಗಳನ್ನು ಸಮತಟ್ಟಾದ ದೊಡ್ಡದಾಹ ೮ x೧೦ ಫೂಟ್ ಅಳತೆಯ ಭಿತ್ತಿ ಹಾಗೂ ೬x೮ ಫೂಟ್ ಅಳತೆಯ ಭಿತ್ತಿಗಳನ್ನು ಸಿದ್ಧಪಡಿಸಿಕೊಂಡು ಅದರಲ್ಲಿ ಆಯತ ಮತ್ತು ಚೌರಸದ ಆಕಾರದ ಪಟ್ಟಿಗಳನ್ನು ದೊಡ್ಡದು ಮತ್ತು ಸಣ್ಣದು ಹೀಗೆ ಕ್ರಮಬದ್ಧವಾಗಿ ರಚಿಸಿಕೊಂಡ ಚಿತ್ರಗಳನ್ನು ರಚಿಸಲಾಗಿದೆ.

೭. ಪ್ರಮುಖ ಮಾಡು ಒಂದರಲ್ಲಿಯೇ ಒಂದು ಸಂಯೋಜನೆಯಲ್ಲಿ ೨೦ ರಿಂದ ೩೬ ಜನರ ವಿವಿಧ ಭಂಗಿಗಳಲ್ಲಿ ಚಿತ್ರಿಸಿರುವುದು ಹಾಗೂ ಯಾವ ವ್ಯಕ್ತಿಯನ್ನು ಎಲ್ಲಿ ಚಿತ್ರಿಸಬೇಕು ಎಂಬ ಕಲಾವಿದನ ಜಾಣ್ಮೆಯೂ ಮೆಚ್ಚಿಕೊಳ್ಳುವಂತಾಗಿದೆ.

೮. ಮಹಿಳೆಯರ ಉಡುಗೆ ಮರಾಠಾ ಶೈಲಿಯ ಚಿತ್ರಗಳಂತೆ ಸೀರೆಯನ್ನು ಕಚ್ಚೆ ಹಾಕಿ ಧರಿಸಿರುವುದು, ಚೂಡಿದಾರ, ಗಾಗ್ರಾ (ಲಂಗಾ) ರವಿಕೆ, ಕುಪ್ಪಸಗಳನ್ನು ಬಳಸಿದ್ದು ಈ ಚಿತ್ರಗಳಲ್ಲಿಯ ಉಡುಗೆಗಳು ರಜಪೂತ, ಮರಾಠಾ ಹಾಗೂ ದಖನ್ ಕಲೆಯ ಪ್ರಭಾವಗಳಿಂದ ರಚನೆಗೊಂಡಂತೆ ಕಂಡುಬರುತ್ತವೆ.

೯. ಮಹಿಳೆಯರ ಕೇಶಗಳು ಉದ್ದನೆಯ ಜಡೆಯನ್ನು ಹಾಕಿದ್ದು ಕೆಲವು ಕಡೆ ತುರುಬು ಕಟ್ಟಿಕೊಳ್ಳಲಾಗಿದೆ.

೧೦. ಪುರುಷರು ಧೋತ್ರ ಉಟ್ಟುಕೊಂಡಿದ್ದು ಕಚ್ಚೆಯನ್ನು ಹಾಕಿಕೊಂಡಿರುವರು. (ಶರ್ಟ) ಅಂಗಿಯನ್ನು ತೊಟ್ಟುಕೊಂಡಿರುವರು.

೧೧. ಇಲ್ಲಿಯ ಚಿತ್ರಗಳಲ್ಲಿ ಮಹಾರಾಜರ, ಸರ್ಧಾರ್‌ರ ರಾಣಿಯರ ಗ್ರಾಮೀಣ ಜನರ, ಸಾಧು ಸಂತರ ವಿವಿಧ ಬಗೆಯ ಚಿತ್ರಗಳು ರಚನೆಗೊಂಡಿದ್ದು ಒಂದೇ ತೆರನಾದ ಶೈಲಿ ತಂತ್ರಗಳನ್ನು ಹೊಂದಿದ್ದರೂ ಕೂಡಾ ಕೆಲವು ಜನಪದ ಶೈಲಿಯ ಚಿತ್ರಗಳು ಕಂಡುಬರುತ್ತವೆ.

೧೨. ಇಲ್ಲಿಯ ಚಿತ್ರಗಳಿಗೆ ರಜಪೂತ ಕಲೆಯ ದಟ್ಟವಾದ ಪ್ರಭಾವವಿರುವುದು ಮರಾಠಾ ದಖ್ಖನ್ ಕಲೆಗಳ ನೆರಳಿನಲ್ಲಿ ಬೆಳೆದು ಬಂದಿರುವುದು ಕಂಡುಬರುತ್ತದೆ.

೧೩. ಕೃಷ್ಣ ರಾಧೆಯರ ಗೋಪಿಕಾ ಸ್ತ್ರೀಯರ ಕಥಾ ನಿರೂಪಣೆಯ ಚಿತ್ರಗಳೊಂದಿಗೆ ಕಲಾವಿದ ತನ್ನ ಕಾಲದ ಸಮಾಜವನ್ನು ಸಮಕಾಲೀನ ರಾಜಕೀಯ ವಿದ್ಯಮಾನಗಳು ಸಾಂಸ್ಕೃತಿಕ ಅಧ್ಯಯನದಿಂದಾಗಿ ಅಂದಿನ ಜನರ ಆಶಯಗಳನ್ನು ಹೀಗೆ ಅನೇಕ ವಿಷಯಗಳನ್ನು ತಿಳಿದುಕೊಳ್ಳಲು ಸಹಕಾರಿಯಾಗಿದೆ.

೧೪. ಇಲ್ಲಿಯ ಚಿತ್ರಗಳು ಕಿರು ರೂಪದ ಚಿತ್ರಗಳಾಗಿದ್ದು, ಸೂಕ್ಷ್ಮ ಪ್ರಮಾಣದ ಶಕ್ತಿಯುತವಾದ ರೇಖೆಗಳೊಂದಿಗೆ ಮೂಡಿಬಂದ ಈ ಅಲಂಕಾರಿಕ ಶೃಂಗಾರಮಯ ಚಿತ್ರಗಳು ಭಿತ್ತಿಯ ಮೇಲೆ ಬಿಡಿಸಿದ್ದು ಅಭೂತಪೂರ್ವವಾದುದು. ಈವರೆಗೆ ಕಾಗದ, ತಾಳೆಗರಿಗಳಲ್ಲಿದ್ದ ಕಿರುರೂಪಗಳನ್ನು ಭಿತ್ತಿಗೆ ಪರಿಚಯಿಸಿದ ಪ್ರಥಮ ಕನ್ನಡಿಗರು.

೧೫. ಈ ಅಧ್ಯಯನವನ್ನು ದರ್ಭಾರ್ ಹಾಲ್‌ದಲ್ಲಿಯ ಚಿತ್ರಗಳು ಮತ್ತು ಪಹಾರ್ ಹಾಲ್‌ದಲ್ಲಿಯ ಭಿತ್ತಿ ಚಿತ್ರಗಳೆಂದು ಎರಡು ಭಾಗಗಳನ್ನು ಮಾಡಿಕೊಂಡು ಅಧ್ಯಯನ ಮಾಡಲಾಗಿದೆ.

ಇದು ಕಾಲಮಿತಿಯ ಅಧ್ಯಯನವಾಗಿರುವುದರಿಂದ ಈ ಅಧ್ಯಯನವು ಒಂದು ಪಕ್ಷಿನೋಟದ ಚಿತ್ರಣವನ್ನು ಕೊಟ್ಟಿದೆ. ಸಮಯದ ಮಿತಿಯಲ್ಲಿ ಪ್ರಮುಖ ಅಂಶಗಳನ್ನು ಇಲ್ಲಿ ಚರ್ಚಿಸಲಾಗಿದೆ. ಇನ್ನೂ ಹೊಸ ಹೊಸ ಅಂಶಗಳನ್ನು ಅಧ್ಯಯನಕಾರರು ಹುಡುಕಲು ಇಲ್ಲಿ ಸಾಕಷ್ಟು ಅವಕಾಶವಿದೆ. ಮುಂಬರುವ ಅಧ್ಯಯನಕ್ಕೆ ಪ್ರಸ್ತುತ ಅಧ್ಯಯನ ಒಂದು ತೋರುದೀವಿಗೆಯಾಗುತ್ತದೆ ಎಂಬ ವಿಶ್ವಾಸವನ್ನು ಹೊಂದಲಾಗಿದೆ.

v v v

# ಗ್ರಂಥಋಣ

## I ಕನ್ನಡ ಗ್ರಂಥಗಳು

ಅವಲೋಕನ : ಸಂ.ಎಚ್ಚೆಸ್ಕೆ
ಕರ್ನಾಟಕ ಸಮೀಕ್ಷೆ
ಕನ್ನಡ ಮತ್ತು ಸಂಸ್ಕೃತಿ ನಿರ್ದೇಶನಾಲಯ
ಬೆಂಗಳೂರು.

ಆಲೇಖ್ಯ : ಡಾ.ಅ.ಲ.ನರಸಿಂಹನ್
"ಸಂಯೋಜಿತ", ಬೆಂಗಳೂರು, ೧೯೯೯

ಉತ್ತರ ಕರ್ನಾಟಕದ ಭಿತ್ತಿಚಿತ್ರಕಲೆ : ಡಾ.ಯಾದಪ್ಪ ಪರದೇಶಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ
ಪಿಎಚ್.ಡಿ. ಮಹಾಪ್ರಬಂಧ ೨೦೦೧

ಕರ್ನಾಟಕದ ಜನಪದ ಚಿತ್ರಕಲೆ : ಡಾ.ಎಸ್.ಸಿ.ಪಾಟೀಲ
ವೀರಶೈವ ಅಧ್ಯಯನ ಸಂಸ್ಥೆ
ಗದಗ–೧೯೯೩.

ಕರ್ನಾಟಕದಲ್ಲಿ ಚಿತ್ರಕಲೆ : ಡಾ.ಶಿವರಾಮ ಕಾರಂತ
ಪ್ರಸಾರಾಂಗ, ಮೈಸೂರು ವಿಶ್ವವಿದ್ಯಾಲಯ
ಮೈಸೂರು–೧೯೭೧

ಕರ್ನಾಟಕ ಚರಿತ್ರೆ : (ಸಂ) ಡಾ.ಸೆಬಾಸ್ಟಿಯನ್ ಜೋಸೆಫ್
ಸಂಪುಟ ಮಾಲೆ–೬ (ಸಂ) ಪ್ರೊ.ಬಿ.ಷೇಕ್‌ಅಲಿ
ಕನ್ನಡ ವಿಶ್ವವಿದ್ಯಾಲಯ, ಹಂಪಿ–೧೯೯೭

ಕರ್ನಾಟಕದ ಕಿರುರೂಪ ಚಿತ್ರಗಳು : ಶ್ರೀ ಬಿ.ಎಂ.ಪಾಟೀಲ
ಅಪ್ರಕಟಿತ ಲೇಖನ–೨೦೦೭

ಕರ್ನಾಟಕದ ಕರಕುಶಲ ಕಲೆಗಳು : ಶ್ರೀ ಬಿ.ಎಂ.ಚಂದ್ರಶೇಖರಯ್ಯ
ಐ.ಬಿ.ಎಚ್. ಪ್ರಕಾಶನ
ಬೆಂಗಳೂರು–೧೯೮೩

ಕರ್ನಾಟಕದ ಭಿತ್ತಿಚಿತ್ರ ಪರಂಪರೆ : ಡಾ.ಅ.ಲ.ನರಸಿಂಹನ್
ಕರ್ನಾಟಕ ಲಲಿತಕಲಾ ಅಕಾಡೆಮಿ
ಬೆಂಗಳೂರು–೧೯೯೮

ಚಿತ್ರಕಲಾ ಪ್ರಪಂಚ : (ಸಂ) ಶ್ರೀ ಪಿ.ಆರ್.ತಿಪ್ಪೇಸ್ವಾಮಿ
ಕರ್ನಾಟಕ ಲಲಿತ ಕಲಾ ಅಕಾಡೆಮಿ
ಬೆಂಗಳೂರು-೧೯೯೩

ರೇಖಾ ಚಿತ್ರ : ಶ್ರೀ ಬಿ.ವಿ.ಕೆ.ಶಾಸ್ತ್ರಿ
ಕರ್ನಾಟಕ ಲಲಿತಕಲಾ ಅಕಾಡೆಮಿ
ಜೆ.ಸಿ.ರಸ್ತೆ, ಕನ್ನಡ ಭವನ
ಬೆಂಗಳೂರು ೧೯೯೧
ಬೆಂಗಳೂರು-೧೯೯೧

ಭಾರತೀಯ ಚಿತ್ರಕಲೆ : ಡಾ.ಶಿವರಾಮ ಕಾರಂತರು
ಜನಪ್ರಿಯ ಪುಸ್ತಕ ಮಾಲೆ
ಕರ್ನಾಟಕ ಸರಕಾರ, ಕನ್ನಡ ಪುಸ್ತಕ ಪ್ರಾಧಿಕಾರ
ಬೆಂಗಳೂರು-೧೯೩೦

"ನಿಪ್ಪಾಣಿ ದರ್ಶನ" : ಶ್ರೀ ಯಶವಂತರಾವ್ ಚವ್ಹಾಣ
ಸಾಂಸ್ಕೃತಿಕ ಪ್ರತಿಷ್ಠಾನ

ನಿಪ್ಪಾಣಿ ಭಿತ್ತಿಚಿತ್ರಕಲೆ : ಶ್ರೀ ಜಗದೀಶ್ ಖೋತ್
ಹಾಲಭಾವಿ ಸ್ಕೂಲ ಆಫ್ ಆರ್ಟ, ಧಾರವಾಡ
ಅಂತಿಮ ಡಿಪ್ಲೋಮಾ ಯೋಜನಾ ವರದಿ-೨೦೦೬

ವಿಜಯನಗರ ಭಿತ್ತಿಚಿತ್ರಕಲೆ : ಕುಮಾರಿ ಸುಚಿತ್ರಾ ಲಿಂಗದಳ್ಳಿ
ಕನ್ನಡ ವಿಶ್ವವಿದ್ಯಾಲಯಕ್ಕೆ ಸಲ್ಲಿಸಿದ ಎಂ.ಫಿಲ್
ಮಹಾಪ್ರಬಂಧ-೨೦೦೬

ಶೃಂಗಾರ ಲಹರಿ : ಪ್ರೊ. ಎಂ.ಎಚ್. ಕೃಷ್ಣಯ್ಯ
ಸಿ.ಎಂ.ಎನ್.ಪ್ರಕಾಶನ
ಬೆಂಗಳೂರು-೧೯೮೯

ಜ್ಞಾನ ಗಂಗೋತ್ರಿ : ಪ್ರ.ಸಂ.ನಿರಂಜನ
ಕಿರಿಯರ ವಿಶ್ವಕೋಶ ಸಂಪುಟ-೫
ಕಲೆಸಾಹಿತ್ಯ, ಕರ್ನಾಟಕ ಸಹಕಾರಿ ಪ್ರಕಾಶನ ಮಂದಿರ
ಬೆಂಗಳೂರು-೧೯೭೩

ದಖನಿಚಿತ್ರ ಕಲೆ : ಶ್ರೀ. ಎಸ್.ಕೆ.ಅರುಣಿ
ಕರ್ನಾಟಕ ಲಲಿತ ಕಲಾ ಅಕಾಡೆಮಿ
ಬೆಂಗಳೂರು-೨೦೦೧

ನಿಜದ ನೆಲೆ : (ಪ್ರಸಂ.) ಡಾ.ಬಿ.ಆರ್.ಹಿರೇಮಠ
(ಡಾ.ಬಿ.ಕೆ.ಹಿರೇಮಠ ಅಭಿನಂದನಾ ಗ್ರಂಥ) (ಸಂ) ಡಾ.ಎಸ್.ಸಿ.ಪಾಟೀಲ
ವೈ.ಮ.ಪ್ರಕಾಶನ
ಬಸವೇಶ್ವರ ವಿದ್ಯಾವರ್ಧಕ ಸಂಘ
ಬಾಗಲಕೋಟ-೫೮೭೧೦೧

## II. ಇಂಗ್ಲೀಷ ಗ್ರಂಥಗಳು

A Notes on Adilshahi paintings : R.C.Agarwal
Archaeological Studies Vol.III
Mysore-1978.

Art and Architecture in Karnataka : (Ed) Dr.D.V.Devaraj and C.S.
Patil
Directorate of archaeology and
Museams, Mysore-1985.

Ajanta : Balasaheb Panth
Bombay-1982

Deccani School-Bijapur : Motichandra
Bijapur Municipality Century
Sauveiner-1954

Deccan Painting : Mark Zebrowski
Roli Book International
New Delhi-1983.

Fundamental of India Art : S.N.Daesgupta
Bharatiya Vidya Bhavan
Bombay-1954

Hand Book of Indian art : E.B. Havell
Murry-1920

Mural Paintings in India : J.C.Nagpal
Gain publication
Delhi-1987

v v v

# ಸಂಕ್ಷೇಪಗಳು

| | | |
|---|---|---|
| ಭಿ.ಚಿ | – | ಭಿತ್ತಿಚಿತ್ರಗಳು |
| ಕ.ಲ.ಕ.ಅ | – | ಕರ್ನಾಟಕ ಲಲಿತಕಲಾ ಅಕಾಡಮಿ |
| ಕ.ವಿ.ವಿ.ಧಾ | – | ಕರ್ನಾಟಕ ವಿಶ್ವ ವಿದ್ಯಾಲಯ ಧಾರವಾಡ |
| ಕ.ವಿ.ವಿ. ಹಂ | – | ಕನ್ನಡ ವಿಶ್ವ ವಿದ್ಯಾಲಯ, ಹಂಪಿ |
| ಕಿ.ರೂ. ಚಿ | – | ಕಿರು ರೂಪ ಚಿತ್ರಗಳು |
| ಮೈ.ವಿ.ವಿ.ಮೈ | – | ಮೈಸೂರು ವಿಶ್ವವಿದ್ಯಾಲಯ ಮೈಸೂರು |
| ದ.ಹಾ. | – | ದರ್ಭಾರ್ ಹಾಲ್ |
| ಪ.ಹಾ. | – | ಪಹಾರಾ ಹಾಲ್ |

